# ಬ್ಯಾಂಕಿಂಗ್ ಪ್ರಪಂಚ

ಸಂಪಾದಕರು

ಎಚ್ಚೆಸ್ಕೆ

ಏಪ್ರಿಲ್ ೧೯೮೨

೨೪

ಸಮನ್ವಯ ಸಮಿತಿ (ರಿ.)
(ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ
ಬೆಂ ಗ ಳೂ ರು 560 002

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ಅರ್ಧವಾರ್ಷಿಕ

# ಬ್ಯಾಂಕಿಂಗ್ ಪ್ರಪಂಚ

ಹಣ ಬ್ಯಾಂಕಿಂಗ್ ವಿಚಾರಗಳಿಗೆ
ಮೀಸಲಾದ ಅರ್ಧವಾರ್ಷಿಕ


**ಸಂಪುಟ ೩ ಸಂಚಿಕೆ ೧**
**ಏಪ್ರಿಲ್ ೧೯೮೨**



**ಸಂಪಾದಕ**
**ಎಚ್ಚೆಸ್ಕೆ**





ಶೀರ್ಷಿಕೆ ವಿನ್ಯಾಸ—ಗಿರಿಧರ ಖಾಸನೀಸ

**ಸಮನ್ವಯ ಸಮಿತಿ (ರಿ.)**
**(ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)**
**ಭಾರತೀಯ ಸ್ಟೇಟ್ ಬ್ಯಾಂಕ್**
ಬೆಂಗಳೂರು ನಗರ ಶಾಖೆ
ಬೆಂಗಳೂರು 560 002

**ವಾರ್ಷಿಕ ಚಂದಾ ರೂ. ೫**
**ಆಜೀವ ಚಂದಾ ರೂ. ೧೦೦**

# ಬ್ಯಾಂಕಿಂಗ್ ಪ್ರಪಂಚ

ಪ ರಿ ವಿ ಡಿ

# ಬ್ಯಾಂಕಿಂಗ್ ಪ್ರಪಂಚ

---

**ಈ ಸಂಚಿಕೆಯ ಲೇಖನದಾರರು**


**ಎ. ರಘುರಾಮ,** ಅಧ್ಯಾಪಕರು, ಸ್ನಾತಕೋತ್ತರ ವಾಣಿಜ್ಯ ವಿಭಾಗ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳಗಂಗೋತ್ರಿ, ಕೊಣಾಜೆ-574 152

**ಬಿ. ಎಸ್. ಚಂದ್ರಶೇಖರ,** ಅಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ, ಬೆಂಗಳೂರು–560 002

**ಸಾ. ಅ. ಮಂಜುನಾಥ,** 45–5/1, 'ಶಂಕರ ಕೃಪ' ಹಿಂಭಾಗ, 16ನೆಯ ಅಡ್ಡ ರಸ್ತೆ, 3ನೆಯ ವಿಭಾಗ, ಜಯನಗರ, ಬೆಂಗಳೂರು–560 011

**ಕೆ. ಕೆ. ಅಮ್ಮಣ್ಣಾಯ,** ಉಪಸಿಬ್ಬಂದಿ ವ್ಯವಸ್ಥಾಪಕ, ಸಿಂಡಿಕೇಟ್ ಬ್ಯಾಂಕ್, ಮಣಿಪಾಲ 576 119

**ಎಚ್. ಎಸ್. ಕೃಷ್ಣ,** ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯ, ಮೈಸೂರು ಶಾಖೆ, ಮೈಸೂರು–570 001

**ಪಿ. ಪಿ. ಆರ್. ಉಪಾಧ್ಯಾಯ,** ಮುಖ್ಯ ಶಿಕ್ಷಕರು, ಸಿಬ್ಬಂದಿ ತರಬೇತಿ ಕೇಂದ್ರ, ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು

**ಪಾ. ರಾಜಗೋಪಾಲ,** ಅಧಿಕಾರಿ, ಭಾಷಾ ವಿಭಾಗ, ಭಾರತೀಯ ಸ್ಟೇಟ್ ಬ್ಯಾಂಕ್, ಪ್ರಾದೇಶಿಕ ಕಛೇರಿ, ಬೆಂಗಳೂರು-560 001

**ಪು. ರಾ. ಮುರಳೀಧರ,** ಕೆನರಾ ಬ್ಯಾಂಕ್, ದಕ್ಷಿಣ ವೃತ್ತ ಕಛೇರಿ, ಬೆಂಗಳೂರು–560 001

**ಡಾ|| ಕೆ. ಶಂಕರ ಶೆಟ್ಟಿ,** ಪ್ರಧಾನ ವ್ಯವಸ್ಥಾಪಕ, ಯೋಜನಾ ವಿಭಾಗ, ವಿಜಯ ಬ್ಯಾಂಕ್, ಬೆಂಗಳೂರು.

## ಬ್ಯಾಂಕಿಂಗ್ ಪ್ರಪಂಚದ ಆಜೀವ ಸದಸ್ಯರು

(ಹಿಂದಿನ ಸಂಚಿಕೆಯಿಂದ)

38 ಪ. ಸು. ರಾಧಾಕೃಷ್ಣ ಶೆಟ್ಟಿ
39 ಪು. ರಾ. ಸುದರ್ಶನ
40 ಕು. ವೆಂ. ನಂದಕುಮಾರ್
41 ಮ. ನಾ. ಕುಲಕರ್ಣಿ
42 ಬಿ. ವಿ. ಚಂದ್ರಮೌಳಿ
43 ನಿಂಗೇಗೌಡ
44 ಕೃಷ್ಣಮೂರ್ತಿ ಉರಾಳ
45 ಪಾ. ರಾಜಗೋಪಾಲ
46 ಎಂ. ಎಸ್. ರಾಘವನ್
ಬಾಲಾಜಿ ಇಂಜನಿಯರಿಂಗ್ ವರ್ಕ್ಸ್
ಕೋಲಾರ–563 101
47 ಶ್ರೀ ಲಕ್ಷ್ಮೀನಾರಾಯಣ ಕೋ-ಆಪರೇಟಿವ್
ಬ್ಯಾಂಕ್ ಲಿ., ಬೆಂಗಳೂರು-560 021
48 ಕೆ. ಚಿದಾನಂದ
49 ಬಿ. ಪಿ. ಹನುಮಂತರಾಯಪ್ಪ
50 ಸುರೇಶ್ ಎಂ. ಬೈಲೂರ್
51 ಎ. ಜಿ. ದೊರೆಸ್ವಾಮಿ ರೆಡ್ಡಿ
52 ಡಿ. ಟಿ. ಜಯಪಾಲ್
53 ಚೋ. ನಂಜಪ್ಪ
54 ಎ. ನಾರಾಯಣ ರಾವ್
55 ಡಿ. ಎಸ್. ದೇವೇಂದ್ರ
56 ದಿ ಆರ್ಯ ವೈಶ್ಯ ಕೋ-ಆಪ್. ಬ್ಯಾಂಕ್ ಲಿ.,
ಹುಬ್ಬಳ್ಳಿ

ನಮ್ಮ ಓದುಗರು ಹೆಚ್ಚು ಸಂಖ್ಯೆಯಲ್ಲಿ ಆಜೀವ ಸದಸ್ಯರಾಗುವ ಮೂಲಕ ಬ್ಯಾಂಕಿಂಗ್ ಪ್ರಪಂಚವನ್ನು ಬಲಪಡಿಸಬೇಕೆಂದು ಕೋರುತ್ತೇವೆ.

ಆಜೀವ ಸದಸ್ಯತ್ವದ ಚಂದಾ ರೂ. 100ನ್ನು **"ಸಮನ್ವಯ ಸಮಿತಿ"**ಯ ಹೆಸರಿಗೆ ಬರೆದ ಚೆಕ್ ಅಥವಾ ಡ್ರಾಫ್ಟ್ ಮೂಲಕ ಕಳುಹಿಸಿ.


**ಸಮನ್ವಯ ಸಮಿತಿ (ರಿ.)**
(ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
**ದ್ವಾರಾ: ಭಾರತೀಯ ಸ್ಟೇಟ್ ಬ್ಯಾಂಕ್**
ಬೆಂಗಳೂರು ನಗರ ಶಾಖೆ
೨೨, ಜಯಚಾಮರಾಜ ಒಡೆಯರ್ ರಸ್ತೆ, ಬೆಂಗಳೂರು–೫೬೦ ೦೦೨

# ಜಾಗತಿಕ ರಂಗದಲ್ಲಿ ಭಾರತೀಯ ಬ್ಯಾಂಕುಗಳು

ಎ. ರಘುರಾಮು

**ಇದುವರೆಗೆ ದೇಶದೊಳಗಿನ ವ್ಯವಹಾರಾಭಿವೃದ್ಧಿಗೇ ಹೆಚ್ಚಿನ ಗಮನ ನೀಡುತ್ತ ಬಂದ ಭಾರತೀಯ ಬ್ಯಾಂಕುಗಳು ಈಗ ಸ್ವಹಿತ ಹಾಗೂ ರಾಷ್ಟ್ರಹಿತ ದೃಷ್ಟಿಯಿಂದ ವಿದೇಶಗಳಲ್ಲಿ ಹೆಚ್ಚುಹೆಚ್ಚಾಗಿ ಶಾಖೆಗಳನ್ನು ತೆರೆಯಬೇಕಾಗಿದೆ.**

ಯಾವುದೇ ದೇಶದ ಪ್ರಗತಿಯಲ್ಲಿ ಬ್ಯಾಂಕುಗಳ ಪಾತ್ರ ಮಹತ್ವದ್ದು. ಭಾರತದ ಅಭಿವೃದ್ಧಿಯಲ್ಲಿ ಬ್ಯಾಂಕುಗಳು ಉತ್ಪ್ರೇರಕ ಶಕ್ತಿಗಳಾಗಿ 'ಕೆಲಸ ನಿರ್ವಹಿಸುತ್ತವೆಯೆನ್ನುವುದನ್ನು ಕಡೆಗಣಿಸುವಂತಿಲ್ಲ. ದೇಶದ ಆರ್ಥಿಕ ಸಂಪತ್ತಿನ ಹೆಚ್ಚಿನ ಭಾಗವನ್ನು ಹೊಂದಿರುವ ಬ್ಯಾಂಕುಗಳು ಇದರ ಸದುಪಯೋಗದಿಂದ ದೇಶದ ಅಭಿವೃದ್ಧಿಯನ್ನು ಸಾಧಿಸಬಹುದು. ಇಲ್ಲವೇ ದುರುಪಯೋಗದಿಂದ ದೇಶವನ್ನು ಅಧೋಗತಿಗೆ ಇಳಿಸಲೂಬಹುದು. 1969ರಲ್ಲಿ ಬ್ಯಾಂಕುಗಳು ರಾಷ್ಟ್ರೀಕರಣವಾದಂದಿನಿಂದ ಭಾರತ ಸರಕಾರ ಮತ್ತು ಭಾರತೀಯ ರಿಜರ್ವ್ ಬ್ಯಾಂಕ್ ದೇಶದ ಅಭಿವೃದ್ಧಿಗೋಸ್ಕರ ಆರ್ಥಿಕ ಸಂಪತ್ತಿನ ಸದುಪಯೋಗಕ್ಕಾಗಿ ಬ್ಯಾಂಕುಗಳಿಗೆ ಹೆಚ್ಚು ಹೆಚ್ಚು ಮಹತ್ವವನ್ನು ನೀಡುತ್ತ ಬಂದಿವೆ. ದೇಶದ ಸಮಾನ ಬೆಳವಣಿಗೆಯನ್ನು ದಕ್ಷತೆಯಿಂದ ನಿರ್ವಹಿಸುವ ಸಾಮಾಜಿಕ ಹೊಣೆಗಾರಿಕೆಯನ್ನು ಬ್ಯಾಂಕುಗಳು ಹೊತ್ತಿವೆ.

ಭಾರತೀಯ ಬ್ಯಾಂಕುಗಳು ಈಗಾಗಲೇ ದೇಶದ ಪ್ರಗತಿಯಲ್ಲಿ ಸಾಕಷ್ಟು ಪಾಲ್ಗೊಂಡಿವೆ. ಪ್ರಗತಿಪರ ಕಾರ್ಯದಲ್ಲಿ ಪಾಲ್ಗೊಳ್ಳುವುದರಿಂದ ಬ್ಯಾಂಕುಗಳ ಲಾಭ ಕಡಿಮೆಯಾಗುತ್ತದೆಂಬುದು ಎಲ್ಲರಿಗೂ ತಿಳಿದ ವಿಷಯ. ದೇಶದ ಅಭಿವೃದ್ಧಿಗಾಗಿ ಬ್ಯಾಂಕುಗಳು ತಮ್ಮ ಲಾಭವನ್ನೂ ಕಡೆಗಣಿಸಬಾರದು. ಅದೇ ರೀತಿ ತಮ್ಮ ಲಾಭಕ್ಕಾಗಿ ದೇಶದ ಅಭಿವೃದ್ಧಿಯನ್ನೂ ಕಡೆಗಣಿಸಬಾರದು. ದೇಶದ ಅಭಿವೃದ್ಧಿ ಮತ್ತು ಲಾಭಗಳ ನಡುವೆ ಬ್ಯಾಂಕುಗಳು ಸಮತೋಲವನ್ನು ಉಳಿಸಿಕೊಳ್ಳಬೇಕಾಗಿದೆ. ತಮ್ಮ ಕಡಿಮೆಯಾದ ಲಾಭವನ್ನು ತುಂಬಲು ಹಾಗೂ ದೇಶದ ಪ್ರಗತಿಯಲ್ಲಿ ಇನ್ನಷ್ಟು ಸಹಕರಿಸಲು ಭಾರತೀಯ ಬ್ಯಾಂಕುಗಳು ಹೆಚ್ಚು ಲಾಭದಾಯಕವಾದ ಮೂಲಗಳನ್ನು ಹುಡುಕಬೇಕಾಗಿದೆ. ಇದಕ್ಕಾಗಿ ಅವು ಜಾಗತಿಕ ರಂಗದಲ್ಲಿ ತಮ್ಮ ಶಾಖೆಗಳನ್ನು ವಿಸ್ತರಿಸಲು ಹಾಗೂ ಇಷ್ಟರವರೆಗೆ ತಮ್ಮ ಶಾಖೆಗಳನ್ನು ತೆರೆಯದ ದೇಶಗಳಲ್ಲಿ ಶಾಖೆಗಳನ್ನು ತೆರೆಯಲು ಇದೀಗ ಕಾಲ ಪರಿಪಕ್ವವಾಗಿದೆ.

ಭಾರತೀಯ ಬ್ಯಾಂಕುಗಳು ವಿದೇಶಗಳಲ್ಲಿ ತಮ್ಮ ಶಾಖೆಗಳನ್ನು ತೆರೆದು ಬ್ಯಾಂಕಿಂಗ್ ವ್ಯವಹಾರವನ್ನು ವೃದ್ಧಿಪಡಿಸುವುದು ದೇಶದ ಆಂತರಿಕ ಆರ್ಥಿಕ ಬೆಳವಣಿಗೆಯ ದೃಷ್ಟಿಯಿಂದಲೂ ಮಹತ್ವದ್ದಾಗಿದೆ. ಈ ನಿಟ್ಟಿನಲ್ಲಿ ಮುಂದಿನ ಅಂಶಗಳನ್ನು ಗಮನಿಸಬಹುದು:

1 ಯಾವುದೇ ದೇಶವನ್ನು ಸಂಕಷ್ಟ ಕಾಲದಲ್ಲಿ ರಕ್ಷಿಸಿ ಅಭಿವೃದ್ಧಿಯತ್ತ ಕೊಂಡೊಯ್ಯಲು ವಿದೇಶಿ ವಿನಿಮಯ ಸಂಗ್ರಹಣೆ ಅತ್ಯಾವಶ್ಯಕ. ವಿದೇಶಿ ವಿನಿಮಯ ದೇಶದ ಅಭಿವೃದ್ಧಿಯನ್ನು ಅಳೆಯುವ ಒಂದು ಮಾನದಂಡ. ಭಾರತ ಅಭಿವೃದ್ಧಿ ಹೊಂದುತ್ತಿರುವ ದೇಶವಾದ್ದರಿಂದ ಅಭಿವೃದ್ಧಿ ಕಾರ್ಯಗಳಲ್ಲಿ ವಿನಿಯೋಜಿಸಲು ಕೂಡ ವಿದೇಶಿ ವಿನಿಮಯ ಅತ್ಯಾವಶ್ಯಕ. ಅಂತೆಯೇ ಭಾರತೀಯ ಬ್ಯಾಂಕುಗಳು ತಮ್ಮ ಶಾಖೆಗಳನ್ನು ವಿದೇಶಗಳಲ್ಲಿ ತೆರೆಯುವುದರಿಂದ ವಿದೇಶಿ ವಿನಿಮಯ ಶೇಖರಣೆಯನ್ನು ಸುಲಭವಾಗಿ ವೃದ್ಧಿಪಡಿಸಬಹುದು.

2 ಭಾರತೀಯ ಬ್ಯಾಂಕುಗಳು ವಿದೇಶಗಳಲ್ಲಿ ಹೆಚ್ಚು ಹೆಚ್ಚು ಶಾಖೆಗಳನ್ನು ತೆರೆಯುವುದರಿಂದ ಎರಡೂ ದೇಶಗಳ ನಡುವೆ ಉತ್ತಮ ಅಭಿಪ್ರಾಯ ಮೂಡಿ ಬಾಂಧವ್ಯ ಬೆಳೆಯುವುದರ ಜೊತೆಗೆ ಭಾರತದ ಆಂತರಿಕ ಆರ್ಥಿಕ ಬೆಳವಣಿಗೆಗೂ ಹೆಚ್ಚಿನ ಪುಷ್ಟಿ ದೊರೆಯುತ್ತದೆ.

3 ಅಭಿವೃದ್ಧಿಶೀಲ ದೇಶಗಳ ಅಂತರರಾಷ್ಟ್ರೀಯ ವ್ಯಾಪಾರಾಭಿವೃದ್ಧಿಯಲ್ಲೂ ಬ್ಯಾಂಕುಗಳ ಪಾತ್ರ ಗಮನಾರ್ಹ

ವಾದುದಾಗಿದೆ. ಭಾರತೀಯ ಬ್ಯಾಂಕುಗಳು ವಿದೇಶಗಳಲ್ಲಿ ಶಾಖೆಗಳನ್ನು ತೆರೆಯುವುದರಿಂದ ಭಾರತ ಮತ್ತು ಆ ದೇಶಗಳ ನಡುವಿನ ವ್ಯಾಪಾರ ಅಭಿವೃದ್ಧಿ ಹೊಂದುವುದಲ್ಲದೆ ಭಾರತದಲ್ಲಿ ತಯಾರಾದ ವಸ್ತುಗಳಿಗೆ ಮಾರುಕಟ್ಟೆಯನ್ನು ದೊರಕಿಸುವುದರಲ್ಲಿ ಸಹಾಯವಾಗುತ್ತದೆ.

4 ಭಾರತೀಯ ಬ್ಯಾಂಕುಗಳು ವಿದೇಶಗಳಲ್ಲಿ ಶಾಖೆಗಳನ್ನು ತೆರೆಯುವುದರಿಂದ ವಿದೇಶಗಳಲ್ಲಿ ಭಾರತೀಯ ಉದ್ಯಮಿಗಳ ಜಂಟಿ ಉದ್ಯಮಗಳಿಗೆ ಪ್ರೋತ್ಸಾಹ ದೊರಕುತ್ತದೆ.

5 ವಿದೇಶಗಳಲ್ಲಿ ಬ್ಯಾಂಕುಗಳು ತಮ್ಮ ಶಾಖೆಗಳನ್ನು ತೆರೆಯುವುದರಿಂದ ಭಾರತದಿಂದ ವಿದೇಶಗಳಿಗೆ ಹಾಗೂ ವಿದೇಶಗಳಿಂದ ಭಾರತಕ್ಕೆ ಹಣದ ರವಾನೆ ಸುಲಭವಾಗುತ್ತದೆ.

6 ವಿದೇಶಗಳಲ್ಲಿ ಶಾಖೆಗಳನ್ನು ತೆರೆಯುವುದರಿಂದ ಬ್ಯಾಂಕುಗಳ ಆಂತರಿಕ ಕೇಂದ್ರೀಕರಣವನ್ನು ಮತ್ತು ಅದರಿಂದುಂಟಾಗುವ ಹಾನಿಕಾರಕವಾದ ಪೈಪೋಟಿಯನ್ನು ತಡೆಗಟ್ಟಬಹುದು. ಬ್ಯಾಂಕುಗಳ ಆಂತರಿಕ ಶಾಖೆಗಳು ಹೆಚ್ಚು

ತಃಖ್ತೆ 1

**ವಿದೇಶಗಳಲ್ಲಿ ಭಾರತೀಯ ಬ್ಯಾಂಕುಗಳ ವ್ಯವಹಾರ (ಅ)**

**1969ರಿಂದ 1979ರ ವರೆಗೆ**

| ವರ್ಷ | ಬ್ಯಾಂಕುಗಳ ಸಂಖ್ಯೆ | ಶಾಖೆಗಳ ಸಂಖ್ಯೆ | ಠೇವಣಿ (ಕೋಟಿ ರೂ.ಗಳಲ್ಲಿ) | | | ಬ್ಯಾಂಕುಗಳ ಸಾಲ (ಆ) ಕೋಟಿ ರೂ. ಗಳಲ್ಲಿ | ಸಾಲ ಠೇವಣಿ ನಿಷ್ಪತ್ತಿ ಸೇಕಡ |
|---|---|---|---|---|---|---|---|
| | | | ಬೇಡಿಕೆ ಠೇವಣಿ | ಸ್ಥಿರ ಠೇವಣಿ | ಒಟ್ಟು | | |
| 1969 | 7 | 56 | 67.73 | 89.79 | 177.52 | 52.64 | 57.8 |
| 1970 | 7 | 59 | 73.44 | 99.40 | 172.84 | 97.26 | 56.3 |
| 1971 | 7 | 62 | 85.90 | 108.99 | 194.89 | 106.63 | 52.1 |
| 1972 | 7 | 69(ಇ) | 135.17 | 142.32 | 277.49 | 163.78 | 59.0 |
| 1973 | 7 | 55(ಇ) | 119.38 | 154.68 | 274.06 | 182.87 | 66.7 |
| 1974 | 8 | 63(ಇ) | 189.68 | 217.17 | 406.85 | 238.62 | 58.7 |
| 1975 | 8 | 77(ಇ) | 239.10 | 370.41 | 609.51 | 368.83 | 60.5 |
| 1976 | 10 | 90(ಇ) | 238.81 | 625.93 | 864.74 | 494.02 | 57.1 |
| 1977 | 11 | 105(ಇ) | 313.31 | 912.87 | 1,226.18 | 850.31 | 69.3 |
| 1978 | 11 | 121(ಈ) | 378.34 | 1,096.12 | 1,474.46 | 1067.37 | 72.4 |
| 1979 | 11 | 127(ಇ) | 401.48 | 1,170.80 | 1,572.28 | 1425.24 | 90.6 |

**ಟಿಪ್ಪಣಿ**

(ಅ) ಇದು ಪಾಕಿಸ್ತಾನ ಮತ್ತು ಬಾಂಗ್ಲಾದೇಶಗಳಲ್ಲಿರುವ ಭಾರತೀಯ ಬ್ಯಾಂಕುಗಳ ಶಾಖೆಗಳ ಹಾಗೂ ಬ್ಯಾಂಕ್ ಆಫ್ ಇಂಡಿಯಾ ಮತ್ತು ಬ್ಯಾಂಕ್ ಆಫ್ ಬರೋಡಾಗಳ ನೈಜೀರಿಯ ಶಾಖೆಗಳ ಅಂಕಿ ಅಂಶಗಳನ್ನು ಒಳಗೊಂಡಿಲ್ಲ.

(ಆ) ಇದರಲ್ಲಿ ಉದರಿ ಮತ್ತು ಮುಂಗಡವಾಗಿ ಸಾಲಕೊಟ್ಟಿದ್ದು ಹಾಗೂ ಬಿಲ್ ಪಡಕೊಂಡದ್ದು ಮತ್ತು ವಟಾಯಿಸಿದ್ದು ಸೇರಿವೆ.

(ಇ) ಇದು ಕೀನ್ಯ, ಫೀಜಿ ದ್ವೀಪಗಳು ಹಾಗೂ ಮಾರಿಷಸ್‌ನಲ್ಲಿರುವ 5 ಸಂಚಾರಿ ಆಫೀಸುಗಳನ್ನೊಳಗೊಂಡಿದೆ.

(ಈ) ಇದು ಕೀನ್ಯ, ಫೀಜಿ ದ್ವೀಪಗಳು, ಮಾರಿಷಸ್ ಹಾಗೂ ಅಮೆರಿಕಗಳಲ್ಲಿರುವ 6 ಸಂಚಾರಿ ಆಫೀಸುಗಳನ್ನೊಳಗೊಂಡಿರುತ್ತದೆ.

ಬಲಿಷ್ಠವೂ ಲಾಭದಾಯಕವೂ ಆಗಿ ಕೆಲಸ ನಿರ್ವಹಿಸಲು ಇದರಿಂದ ಅನುಕೂಲವಾಗುತ್ತದೆ.

7 ಎಲ್ಲಕ್ಕಿಂತ ಮಿಗಿಲಾಗಿ ಭಾರತೀಯ ಬ್ಯಾಂಕುಗಳು ತಮ್ಮ ಸೇವೆಯನ್ನು ವಿದೇಶಗಳಲ್ಲಿರುವ ಭಾರತೀಯರಿಗೆ ಮತ್ತು ವಿದೇಶೀಯರಿಗೆ ಕೂಡ ಒದಗಿಸಬಹುದು.

ಮೇಲೆ ಹೇಳಿದ ಎಲ್ಲ ಕಾರಣಗಳಿಂದಾಗಿ ಭಾರತೀಯ ಬ್ಯಾಂಕುಗಳು ಜಾಗತಿಕ ರಂಗದಲ್ಲಿ ಹೆಚ್ಚು ಹೆಚ್ಚು ಸಕ್ರಿಯವಾಗಿ ಕಾರ್ಯೋನ್ಮುಖವಾಗುವುದು ಅನಿವಾರ್ಯವೂ ಲಾಭದಾಯಕವೂ ಅಭಿನಂದನೀಯವೂ ಆಗಿದೆ.

1969ರ ಜುಲೈ 19ರಂದು ಭಾರತದಲ್ಲಿ 14 ಬ್ಯಾಂಕುಗಳ ರಾಷ್ಟ್ರೀಕರಣವಾದಾಗ 7 ಭಾರತೀಯ ಬ್ಯಾಂಕುಗಳು ವಿದೇಶಗಳಲ್ಲಿ 56 ಶಾಖೆಗಳನ್ನು ಹೊಂದಿದ್ದು ಇವುಗಳಲ್ಲಿ ಒಟ್ಟು ರೂ. 157.52 ಕೋಟಿಯ ಠೇವಣಿಗಳಿದ್ದುವು. ಇವುಗಳ ಸಂಖ್ಯೆ ಬೆಳೆಯುತ್ತ ಬಂದು 1979ರಲ್ಲಿ 11 ಬ್ಯಾಂಕುಗಳ 127 ಶಾಖೆಗಳು ವಿದೇಶಗಳಲ್ಲಿದ್ದುವು. ಇವುಗಳ ಒಟ್ಟು ಠೇವಣಿ ರೂ. 1,572.28 ಕೋಟಿ. 1981ರ ಜೂನ್ ವೇಳೆಗೆ 12 ಬ್ಯಾಂಕುಗಳಲ್ಲಿ 135 ವಿದೇಶಿ ಶಾಖೆಗಳಿದ್ದುವು. ತಃಖ್ತೆ 1, 2, 3ರಿಂದ ವಿದೇಶಗಳಲ್ಲಿ ಭಾರತೀಯ ಬ್ಯಾಂಕುಗಳ ಪ್ರಗತಿ ವಿದಿತವಾಗುತ್ತದೆ.

ತಃಖ್ತೆ 2

**ವಿದೇಶಗಳಲ್ಲಿ ಭಾರತೀಯ ಬ್ಯಾಂಕುಗಳು**

(ಜೂನ್ 1981)

| ಬ್ಯಾಂಕು | ವಿದೇಶಗಳಲ್ಲಿರುವ ಶಾಖೆಗಳು |
|---|---|
| ಬ್ಯಾಂಕ್ ಆಫ್ ಬರೋಡ | 58 |
| ಬ್ಯಾಂಕ್ ಆಫ್ ಇಂಡಿಯ | 23 |
| ಭಾರತ್ ಓವರ್‌ಸೀಸ್ ಬ್ಯಾಂಕ್ | 1 |
| ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯ | 3 |
| ಇಂಡಿಯನ್ ಬ್ಯಾಂಕ್ | 3 |
| ಇಂಡಿಯನ್ ಓವರ್‌ಸೀಸ್ ಬ್ಯಾಂಕ್ | 11 |
| ಪಂಜಾಬ್ ಅಂಡ್ ಸಿಂದ್ ಬ್ಯಾಂಕ್ | 1 |
| ಪಂಜಾಬ್ ನ್ಯಾಷನಲ್ ಬ್ಯಾಂಕ್ | 3 |
| ಸ್ಟೇಟ್ ಬ್ಯಾಂಕ್ ಆಫ್ ಇಂಡಿಯ | 21 |
| ಸಿಂಡಿಕೇಟ್ ಬ್ಯಾಂಕ್ | 1 |
| ಯೂನಿಯನ್ ಬ್ಯಾಂಕ್ ಆಫ್ ಇಂಡಿಯ | 1 |
| ಯುನೈಟೆಡ್ ಕಮರ್ಷಿಯಲ್ ಬ್ಯಾಂಕ್ | 9 |
| | 135 |

ತಃಖ್ತೆ 3

**ವಿವಿಧ ದೇಶಗಳಲ್ಲಿ ಭಾರತೀಯ ಬ್ಯಾಂಕುಗಳ ಶಾಖೆಗಳು**

| ದೇಶಗಳು | ಶಾಖೆಗಳ ಸಂಖ್ಯೆಗಳು | ದೇಶಗಳು | ಶಾಖೆಗಳ ಸಂಖ್ಯೆಗಳು |
|---|---|---|---|
| ಬಹಮಾಸ್ | 2 | ಮಾಲ್ದಿವಿಸ್ | 1 |
| ಬಹ್ರೈನ್ | 2 | ಓಮನ್ | 3 |
| ಬಾಂಗ್ಲಾ ದೇಶ | 2 | ಮಾರಿಷಸ್ | 6 |
| ಬೆಲ್ಜಿಯಂ | 1 | ಪಾಕಿಸ್ತಾನ | 1 |
| ಕೆಮೇನ್ ದ್ವೀಪಗಳು | 1 | ಪನಾಮಾ | 1 |
| ಚಾನಲ್ ದ್ವೀಪಗಳು | 1 | ಸಿಚೆಲ್ಲೆಸ್ | 1 |
| ಫೀಜಿ ದ್ವೀಪಗಳು | 10 | ಸಿಂಗಾಪುರ | 7 |
| ಫ್ರಾನ್ಸ್ | 2 | ಶ್ರೀ ಲಂಕಾ | 6 |
| ಗಯಾನ | 2 | ಥೈಲೆಂಡ್ | 1 |
| ಹಾಂಗ್‌ಕಾಂಗ್ | 14 | ಯುನೈಟೆಡ್ ಅರಬ್ ಎಮಿರೇಟ್ಸ್ | 8 |
| ಜಪಾನ್ | 3 | ಯುನೈಟೆಡ್ ಕಿಂಗ್‌ಡಂ | 44 |
| ಕೀನ್ಯ | 9 | ಯುನೈಟೆಡ್ ಸ್ಟೇಟ್ಸ್ | 5 |
| ಕೊರಿಯ | 1 | ಪಶ್ಚಿಮ ಜರ್ಮನಿ | 1 |
| | | | 135 |

ಆಕರಗಳು: ಬ್ಯಾಂಕುಗಳ ವಾರ್ಷಿಕ ವರದಿಗಳು

Reserve Bank of India, *Annual Report* 1979-80, August 1980 and *Report on Trend and Progress of Banking in India*, 1979-80, August 1980

Commerce Research Bureau's Data System

ಮೇಲಿನ ತಃಖ್ತೆಗಳಿಂದ ವಿದಿತವಾಗುವುದೇನೆಂದರೆ, ಭಾರತೀಯ ಬ್ಯಾಂಕುಗಳಲ್ಲಿ ಬ್ಯಾಂಕ್ ಆಫ್ ಬರೋಡ ಅತ್ಯಂತ ಹೆಚ್ಚು (58) ಶಾಖೆಗಳನ್ನು ವಿದೇಶಗಳಲ್ಲಿ ಹೊಂದಿದ್ದು, ಇಂಡಿಯನ್ ಓವರ್‌ಸೀಸ್ ಬ್ಯಾಂಕ್, ಪಂಜಾಬ್ ಅಂಡ್ ಸಿಂಧ್ ಬ್ಯಾಂಕ್, ಸಿಂಡಿಕೇಟ್ ಬ್ಯಾಂಕ್, ಯೂನಿಯನ್ ಬ್ಯಾಂಕ್ ಆಫ್ ಇಂಡಿಯ ಇವು ಅತಿ ಕಡಿಮೆ ಶಾಖೆಗಳನ್ನು (ತಲಾ ಒಂದೊಂದು) ವಿದೇಶಗಳಲ್ಲಿ ಹೊಂದಿವೆ. ಬರ್ಮ ಮೊದಲಾದ ದೇಶಗಳಲ್ಲಿ ಬ್ಯಾಂಕುಗಳ ರಾಷ್ಟ್ರೀಕರಣದಿಂದಾಗಿ ಹಾಗೂ ಉಗಾಂಡ ಮತ್ತು ನೈಜೀರಿಯ ದೇಶಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಭಾರತೀಯ ಬ್ಯಾಂಕುಗಳ ಶಾಖೆಗಳನ್ನು ಆ ದೇಶದ ಬ್ಯಾಂಕುಗಳ ಉಪಸಂಸ್ಥೆಗಳಾಗಿ ಪರಿವರ್ತಿಸಿದುದರಿಂದಾಗಿ 1973ರಲ್ಲಿ ವಿದೇಶಿ ಶಾಖೆಗಳ ಸಂಖ್ಯೆಗಳಲ್ಲಿ ಇಳಿತ ಕಂಡುಬರುತ್ತದೆ. ರಾಷ್ಟ್ರೀಕರಣವಾದ ಬ್ಯಾಂಕುಗಳಲ್ಲಿ 12 ಬ್ಯಾಂಕುಗಳು ಮಾತ್ರ 26 ದೇಶಗಳಲ್ಲಿ ಒಟ್ಟು 135 ಶಾಖೆಗಳನ್ನು ಹೊಂದಿವೆ. ಖಾಸಗಿ ಬ್ಯಾಂಕುಗಳು ವಿದೇಶಗಳಲ್ಲಿ ಶಾಖೆಗಳನ್ನು ಇಷ್ಟರವರೆಗೆ ತೆರೆದಿಲ್ಲ. ಹೆಚ್ಚು ಕಡಿಮೆ ಭಾರತೀಯ ಬ್ಯಾಂಕುಗಳು ತಮ್ಮ ವಿದೇಶಿ ಶಾಖೆಗಳ ¼ ಭಾಗವನ್ನು ಇಂಗ್ಲೆಂಡಿನಲ್ಲೇ ತೆರೆದಿರುತ್ತವೆ. ಇದಕ್ಕೆ ಕಾರಣ ಬ್ರಿಟಿಷ್ ಸರಕಾರದ ಉದಾರ ಲೈಸೆನ್ಸ್ ನೀತಿಯಾಗಿರುತ್ತದೆ.

ಬ್ಯಾಂಕ್ ಆಫ್ ಬರೋಡ ಮತ್ತು ಬ್ಯಾಂಕ್ ಆಫ್ ಇಂಡಿಯ ಅನುಕ್ರಮವಾಗಿ ಬಾಂಗ್ಲಾದೇಶದ ನಾರಾಯಣ್ ಗಂಜ್ ಮತ್ತು ಪಾಕಿಸ್ತಾನದ ಕರಾಚಿಯಲ್ಲಿ ತಲಾ ಒಂದೊಂದು ಕಾರ್ಯವೆಸಗದ ಶಾಖೆಗಳನ್ನು ಹೊಂದಿರುತ್ತವೆ. ಇಂಥ ಶಾಖೆಗಳಿಂದಾಗಿ ವಿದೇಶಗಳಲ್ಲಿರುವ ಭಾರತೀಯ ಬ್ಯಾಂಕುಗಳ ಹೆಚ್ಚಳ ಕಂಡು ಬರುವುದೇ ಹೊರತು ಯಾವುದೇ ಲಾಭವಿಲ್ಲ.

ವಿದೇಶಗಳಲ್ಲಿ ಭಾರತೀಯರು ಹೆಚ್ಚಾಗಿ ನೆಲೆಸಿರುವಲ್ಲಿ ಭಾರತೀಯ ಬ್ಯಾಂಕುಗಳು ಕೇಂದ್ರೀಕೃತವಾಗಿವೆ. ಇದಕ್ಕೆ ಒಂದು ಕಾರಣವೆಂದರೆ ಅವು ವಿದೇಶಿ ಬ್ಯಾಂಕುಗಳಿಂದ ಎದುರಿಸುವ ಪೈಪೋಟಿ ಮತ್ತು ಈ ಪೈಪೋಟಿಯನ್ನೆದುರಿಸಲು ಬೇಕಾದಂತಹ ಬಂಡವಾಳದ ಕೊರತೆ. ಇನ್ನೊಂದು ಕಾರಣ, ವಿದೇಶಗಳಲ್ಲಿರುವ ಭಾರತೀಯರಿಂದ ಹಣವನ್ನು ಭಾರತಕ್ಕೆ ರವಾನಿಸುವುದು ಹೆಚ್ಚು ಸುಲಭವಾಗಿದೆ ಮತ್ತು ಲಾಭದಾಯಕವಾಗಿದೆ.

**ಸಲಹೆಗಳು**

1 ಭಾರತೀಯ ಬ್ಯಾಂಕುಗಳಿಗೆ ದೇಶದೊಳಗಿನ ವ್ಯಾಪಾರಕ್ಕಿಂತ ವಿದೇಶಗಳಲ್ಲಿ ವ್ಯಾಪಾರ ಹೆಚ್ಚು ಲಾಭದಾಯಕವಾಗಿದೆ. ಆದ್ದರಿಂದ ದೇಶದ ಪ್ರಗತಿಯ ಹಾಗೂ ತಮ್ಮ ಪ್ರಗತಿಯ ದೃಷ್ಟಿಯಿಂದ ಅವು ಹೆಚ್ಚು ಹೆಚ್ಚು ಶಾಖೆಗಳನ್ನು ವಿದೇಶಗಳಲ್ಲಿ ವಿಸ್ತರಿಸುವುದು ಅಗತ್ಯ. ಹಾಗೆಯೇ ಇಷ್ಟರವರೆಗೆ ಶಾಖೆಗಳನ್ನು ತೆರೆಯದ ದೇಶಗಳಲ್ಲಿ ಬ್ಯಾಂಕಿಂಗ್ ವ್ಯವಹಾರವನ್ನು ವೃದ್ಧಿಪಡಿಸುವುದು ಸದ್ಯದ ಅಗತ್ಯ. ಈ ನಿಟ್ಟಿನಲ್ಲಿ ಭಾರತೀಯ ಬ್ಯಾಂಕುಗಳು ಬ್ರಿಟಿಷ್ ಬ್ಯಾಂಕುಗಳನ್ನು ಅನುಸರಿಸುವುದೊಳಿತು. ಬ್ರಿಟಿಷ್ ಬ್ಯಾಂಕ್‌ಗಳ ಚರಿತ್ರೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಅವು 19 ನೆಯ ಶತಮಾನದಲ್ಲೇ ವಿದೇಶಗಳ ಎಲ್ಲ ಭಾಗಗಳಲ್ಲೂ ತಮ್ಮ ಶಾಖೆಗಳನ್ನು ತೆರೆದದ್ದರಿಂದ ತಮ್ಮ ದೇಶದ ವ್ಯಾಪಾರ ಅಭಿವೃದ್ಧಿಗೆ ಮತ್ತು ಪ್ರಗತಿಗೆ ಸಹಾಯವಾಗಿರುವುದು ಕಂಡುಬರುತ್ತದೆ.

2 ಭಾರತೀಯ ಬ್ಯಾಂಕುಗಳು ತಮ್ಮ ಶಾಖೆಗಳನ್ನು ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ವಿಸ್ತರಿಸುವುದು ಕೂಡ ಅತ್ಯಂತ ಅಗತ್ಯ. ಇದರಿಂದ ಪರಸ್ಪರ ವ್ಯಾಪಾರ ಅಭಿವೃದ್ಧಿಗೊಳ್ಳುವುದಲ್ಲದೆ ಭಾರತದ ಬೆಳವಣಿಗೆಗೆ ಬೇಕಾದ ಅಗತ್ಯಗಳನ್ನು ಹಾಗೂ ಸಲಹೆಗಳನ್ನು ಪಡೆಯುವುದು ಸಾಧ್ಯ.

3 ಭಾರತೀಯ ಬ್ಯಾಂಕುಗಳು ವಿದೇಶಗಳಲ್ಲಿ ಭಾರತೀಯರಿರುವ ಕಡೆಗಳಲ್ಲಿ ಮಾತ್ರ ತಮ್ಮ ಶಾಖೆಗಳನ್ನು ಕೇಂದ್ರೀಕರಿಸದೆ ಇತರ ಕಡೆಗಳಲ್ಲೂ ಶಾಖೆಗಳನ್ನು ತೆರೆಯಲು ದಿಟ್ಟ ಹೆಜ್ಜೆಯನ್ನಿಡಬೇಕಾಗಿದೆ. ಇದರಿಂದ ದೇಶದ ಅಭಿವೃದ್ಧಿಗೆ ಬೇಕಾದ ವಿದೇಶಿ ವಿನಿಮಯವನ್ನು ಹೆಚ್ಚಾಗಿ ಸಂಗ್ರಹಿಸಲು ಸಾಧ್ಯವಾಗುತ್ತದೆ.

4 ಭಾರತೀಯ ಬ್ಯಾಂಕುಗಳ ಬಂಡವಾಳ ವಿದೇಶೀ ಬ್ಯಾಂಕುಗಳ ಬಂಡವಾಳದೊಂದಿಗೆ ಹೋಲಿಸಿದರೆ ಅತ್ಯಲ್ಪ. ವಿದೇಶಗಳಲ್ಲಿ ತಮ್ಮ ಶಾಖೆಗಳನ್ನು ವಿಸ್ತರಿಸುವಾಗ ಇವು ಆ ದೇಶಗಳ ಬ್ಯಾಂಕುಗಳ ಪೈಪೋಟಿಯನ್ನೆದುರಿಸಬೇಕಾಗಿದೆ. ಈ ದಿಸೆಯಲ್ಲಿ ಪ್ರಾಥಮಿಕ ಅಗತ್ಯವೆಂದರೆ, ಬ್ಯಾಂಕುಗಳ ಬಂಡವಾಳವನ್ನು ವೃದ್ಧಿಪಡಿಸುವುದು. ಇದಕ್ಕೋಸ್ಕರ ಭಾರತ ಸರಕಾರ ವಾರ್ಷಿಕ ಬಜೆಟಿನಲ್ಲಿ ಸಾಕಷ್ಟು ಹಣವನ್ನು ಮೀಸಲಿರಿಸಬೇಕಾಗಿದೆ. ಬ್ಯಾಂಕುಗಳ ರಾಷ್ಟ್ರೀಕರಣವಾದಂದಿನಿಂದ ತಮ್ಮ ಲಾಭದ ಒಂದಂಶವನ್ನು ಸಲ್ಲಿಸುತ್ತ ಸಾರ್ವಜನಿಕ ಬ್ಯಾಂಕುಗಳು ಗಣನೀಯ ಮೊತ್ತವನ್ನು ಸರಕಾರದ ಬೊಕ್ಕಸಕ್ಕೆ ವರ್ಗಾಯಿಸಿವೆ. ಆದುದರಿಂದ ಈಗ ಬ್ಯಾಂಕುಗಳ ಬಂಡವಾಳ ವೃದ್ಧಿಯ ಕೆಲಸ ಭಾರತ ಸರಕಾರದ ಆದ್ಯ ಕರ್ತವ್ಯವಾಗಿದೆ. ಅದೇ ರೀತಿ ಬ್ಯಾಂಕುಗಳು ಕೂಡ ತಮ್ಮ ಲಾಭದ ಸ್ವಲ್ಪ ಭಾಗವನ್ನು ಬಂಡವಾಳಕ್ಕೆ ಪರಿವರ್ತಿಸುವುದರಿಂದ ಬಂಡವಾಳವನ್ನು ವೃದ್ಧಿಪಡಿಸಬಹುದಾಗಿದೆ. ಆದರೆ ಇದು ತುಂಬ ಸಮಯವನ್ನು ತೆಗೆದುಕೊಳ್ಳುತ್ತದೆ.

5 ಭಾರತೀಯ ಬ್ಯಾಂಕುಗಳು ತೈಲ ಲಭಿಸುವ ಪಶ್ಚಿಮ ಏಷ್ಯ ದೇಶಗಳಲ್ಲಿ (ಸೌದಿ ಅರೇಬಿಯಾ, ಮಸ್ಕಟ್, ಕುವೈಟ್, ದುಬಾಯ್, ಅಬು ದಾಬಿ ಇತ್ಯಾದಿ) ಹೆಚ್ಚು

ಹೆಚ್ಚು ಶಾಖೆಗಳನ್ನು ತೆರೆಯುವುದರಿಂದ ಭಾರತದ ಅಭಿವೃದ್ಧಿಗೆ ಅಗತ್ಯವಾದ ವಿದೇಶಿ ವಿನಿಮಯವನ್ನು ರವಾನಿಸಲು ಉತ್ತಮ ಅವಕಾಶವಿದೆಯಲ್ಲದೆ ತಾವೂ ಲಾಭದಾಯಕವಾದ ವ್ಯವಹಾರ ನಡೆಸಬಹುದಾಗಿದೆ. ಈ ದೇಶಗಳಲ್ಲಿ ಇಷ್ಟರವರೆಗೆ ಬ್ಯಾಂಕ್ ಆಫ್ ಬರೋಡ ಮತ್ತು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯ ಮಾತ್ರ ಕೆಲವೇ ಶಾಖೆಗಳನ್ನು ಹೊಂದಿವೆ. ಆದ್ದರಿಂದ ಹೆಚ್ಚು ಶಾಖೆಗಳನ್ನು ತೆರೆಯಲು ಅವಕಾಶವಿದೆ.

ಈವರೆಗೆ ದೇಶದೊಳಗೇ ಹೆಚ್ಚು ಕೇಂದ್ರೀಕೃತವಾದ ಬ್ಯಾಂಕುಗಳು ದೇಶದ ಮತ್ತು ತಮ್ಮ ಸ್ವಂತದ ಹಿತದೃಷ್ಟಿಯಿಂದ ವಿದೇಶಗಳಲ್ಲಿ ಆದಷ್ಟು ಹೆಚ್ಚು ಶಾಖೆಗಳನ್ನು ವಿಸ್ತರಿಸಬೇಕಾಗಿದೆ. ವಿದೇಶಗಳಲ್ಲೂ ಭಾರತೀಯರಿರುವಲ್ಲಿ ಮಾತ್ರ ಕೇಂದ್ರೀಕೃತವಾಗದೆ ಭಾರತೀಯ ಬ್ಯಾಂಕುಗಳು ತಮ್ಮ ಶಾಖೆಗಳನ್ನು ಇತರ ಕಡೆಗಳಲ್ಲೂ, ಇಷ್ಟರವರೆಗೆ ತೆರೆಯದ ದೇಶಗಳಲ್ಲೂ ತೆರೆಯಬೇಕಾಗಿದೆ. ಇದಕ್ಕಾಗಿ ಅವು ಉತ್ತಮ ಸೇವೆ, ಆಕರ್ಷಕ ಬಡ್ಡಿ ದರಗಳು ಮತ್ತು ವೈವಿಧ್ಯಮಯ ಠೇವಣಿ ಯೋಜನೆಗಳನ್ನು ವಿದೇಶೀಯರಿಗೆ ನೀಡಬೇಕಾಗಿದೆ. ವಿದೇಶೀಯರ ಧೋರಣೆ ಕೂಡ ಬದಲಾಗಬೇಕಾಗಿದೆ.

ಒಟ್ಟಿನಲ್ಲಿ ಹೇಳುವುದಾದರೆ ಭಾರತೀಯ ಬ್ಯಾಂಕುಗಳಿಗೆ ವಿದೇಶಗಳಲ್ಲಿ ತಮ್ಮ ವ್ಯವಹಾರಕ್ಕೆ ಹೆಚ್ಚು ಅವಕಾಶವಿರುವುದರಿಂದ ದೇಶದ ಬೆಳವಣಿಗೆಯ ದೃಷ್ಟಿಯಿಂದಲೂ ಸ್ವಹಿತ ದೃಷ್ಟಿಯಿಂದಲೂ ಈ ದಿಸೆಯಲ್ಲಿ ಚಿಂತನೆ ಅನಿವಾರ್ಯವಾಗಿದೆ.

## ತಪ್ಪು ಯಾರದು?

ಸ್ನೇಹಿತನೊಬ್ಬನ ಮದುವೆಯ ಫೋಟೋ ಹಿಡಿಯುವ ಜವಾಬ್ದಾರಿ ಹೊತ್ತಿದ್ದ ನಮ್ಮ ಅಕೌಂಟೆಂಟ್ ಸಾಹೇಬರು, ತಮ್ಮ ಕ್ಯಾಮರಾಗೆ ಫ್ಲಾಷ್ ಇಲ್ಲದಿದ್ದ ಕಾರಣ, ಅರಸೀಕೆರೆಯ ತಮ್ಮ ಇನ್ನೊಬ್ಬ ಬ್ಯಾಂಕ್ ಮಿತ್ರನಿಗೆ ಫೋನ್ ಹಚ್ಚಿ, ತಾವು ಮಾರನೆಯ ದಿನ ಚಿಕ್ಕಮಗಳೂರಿಗೆ ಹೋಗುವ ಮಾರ್ಗದಲ್ಲಿ ಅರಸೀಕೆರೆಯಲ್ಲಿ ಇಳಿದು ಭೇಟಿಯಾಗುತ್ತೇವೆಂದೂ, ಆ ಸಮಯಕ್ಕೆ ಸರಿಯಾಗಿ ಫ್ಲ್ಯಾಷ್ ರೆಡಿಯಾಗಿಟ್ಟುಕೊಂಡಿರಬೇಕೆಂದೂ ಹೇಳಿದ್ದರು. ಆ ಮಿತ್ರ ಅದಕ್ಕೇನು ಫ್ಲ್ಯಾಷ್ ತಾನೆ ಧಾರಾಳವಾಗಿ ತೆಗೆದುಕೊಂಡು ಹೋಗಿ ಮಾರಾಯ್ರೆ ಅಂದಿದ್ದ.

ಸರಿ ಮಾರನೆಯ ದಿನ ನಮ್ಮ ಅಕೌಂಟೆಂಟ್‌ರು ಅರಸೀಕೆರೆಯ ತಮ್ಮ ಮಿತ್ರನ ಬ್ಯಾಂಕ್‌ನಲ್ಲಿ ಕ್ಯಾಮರಾದೊಂದಿಗೆ ಹಾಜರಾದಾಗ ಆ ಬ್ಯಾಂಕಿನ ಜವಾನ ಸುರುಳಿಯಾಗಿ ಸುತ್ತಿದ್ದ ಕಾಗದವನ್ನು ಕೊಟ್ಟು, ಸಾಹೇಬರು ಇದನ್ನು ನಿಮಗೆ ಕೊಡಲು ಹೇಳಿ, ಯಾವುದೋ ಕೆಲಸದ ನಿಮಿತ್ತ ಊರಿಗೆ ಹೋದರು ಎಂದ. ನಮ್ಮ ಅಕೌಂಟೆಂಟರು ಆ ಸುರುಳಿಯನ್ನು ಬಿಚ್ಚಲಾಗಿ ಅದರಲ್ಲಿ ಕಂಡದ್ದು ಮೂರು ಫ್ಲ್ಯಾಷ್ ರಿಪೋರ್ಟ್ ಫಾರಮ್‌ಗಳು!

ಪು. ರಾ. ಮುರಳೀಧರ್

# ಅಂತರರಾಷ್ಟ್ರೀಯ ಹಣ ನಿಧಿ ಮತ್ತು ಅಭಿವೃದ್ಧಿಶೀಲ ರಾಷ್ಟ್ರಗಳು

ಬಿ. ಎಸ್. ಚಂದ್ರಶೇಖರ

**ಪಟ್ಟಭದ್ರ ಹಿತಾಸಕ್ತಿಗಳ ಕೀಲುಗೊಂಬೆ, ಕಠಿಣ ಷರತ್ತುಗಳ ಸಾಲಿಗ, ಕೆಟ್ಟ ಬ್ಯಾಂಕರ್—ಎಂದೆಲ್ಲ ಸಂಬೋಧಿತವಾಗಿರುವ ಅಂತರರಾಷ್ಟ್ರೀಯ ಹಣ ನಿಧಿ ಎಷ್ಟರಮಟ್ಟಿಗೆ ಸಾರ್ಥಕವಾಗಿದೆ?**

ಅಭಿವೃದ್ಧಿ ಹೊಂದುತ್ತಿರುವ ಯಾವ ದೇಶವೂ ವಿದೇಶಿ ವ್ಯಾಪಾರವನ್ನು ನಡೆಸದಿರುವುದು ಸಾಧ್ಯವಿಲ್ಲ. ವಿದೇಶಿ ವ್ಯಾಪಾರದಲ್ಲಿ ಅನೇಕ ರೀತಿಯ ತೊಡಕುಗಳೂ ಅಪಾಯಗಳೂ ಇದ್ದರೂ ಅದಕ್ಕೆ ಪರಿಹಾರಗಳನ್ನು ರಾಷ್ಟ್ರಗಳು ಕಂಡುಕೊಳ್ಳುತ್ತ ಹೋಗಬೇಕಾಗುತ್ತದೆ. ವಿದೇಶಿ ವ್ಯಾಪಾರವೆಂದರೆ ಒಂದು ದೇಶದಿಂದ ಇನ್ನೊಂದು ದೇಶಕ್ಕೆ ಸರಕಿನ, ಮತ್ತು ಪ್ರತಿಯಾಗಿ ಇನ್ನೊಂದು ದೇಶದಿಂದ ಹಣದ, ರವಾನೆ. ಆದ್ದರಿಂದ ಯಾವುದೇ ದೇಶದ ವಿದೇಶಿ ವ್ಯಾಪಾರ ಅದರ ಆರ್ಥಿಕ ಸ್ಥಿತಿ ಮತ್ತು ಹಣದ ಮೌಲ್ಯ ಇವುಗಳಿಗೆ ತಳಕು ಹಾಕಿಕೊಂಡಿರುವುದು ಸಹಜ. ಮುಖ್ಯವಾಗಿ ಒಂದು ರಾಷ್ಟ್ರದ ನಾಣ್ಯದ ಅಂತರರಾಷ್ಟ್ರೀಯ ಮೌಲ್ಯ ಅದರ ವಿದೇಶಿ ವ್ಯಾಪಾರವನ್ನು ಅವಲಂಬಿಸಿರುತ್ತದೆ. ಈ ವಿದೇಶಿ ವ್ಯಾಪಾರದ ಸ್ವರೂಪ ಬದಲಾದಂತೆ ನಾಣ್ಯದ ಅಂತರರಾಷ್ಟ್ರೀಯ ಮೌಲ್ಯವೂ ಬದಲಾಗುತ್ತದೆ ಎಂಬುದು ಗಮನಿಸಬೇಕಾದ ಅಂಶ. ಆದ್ದರಿಂದ ವಿದೇಶಿ ವ್ಯಾಪಾರ ಅಭಿವೃದ್ಧಿ ಹೊಂದಲು ದೇಶಗಳ ನಡುವೆ ಸಹಕಾರ, ಹೊಂದಾಣಿಕೆ ಅಗತ್ಯ.

ವಿಶ್ವದ ಆರ್ಥಿಕ/ಕೈಗಾರಿಕಾ ಅಭಿವೃದ್ಧಿಯಾಗಬೇಕಾದರೆ. ಎಲ್ಲ ರಾಷ್ಟ್ರಗಳೂ ಉತ್ಪಾದನೆಯನ್ನು ಅಧಿಕಗೊಳಿಸಿದರೆ ಸಾಲದು. ಅವು ಪರಸ್ಪರ ವಿನಿಮಯದಲ್ಲಿ ತೊಡಗಿದರೆ ಎಲ್ಲ ರಾಷ್ಟ್ರಗಳಿಗೂ ಸ್ಪರ್ಧಾತ್ಮಕ ದರದಲ್ಲಿ ಉತ್ಪನ್ನಗಳು ಲಭ್ಯವಾಗುತ್ತವೆ. ಇದನ್ನು ತಿಳಿದೂ, ಇತರ ಕಾರಣಗಳಿಂದಾಗಿ ಒಂದನೆಯ ಮಹಾಯುದ್ಧದ ಅನಂತರ ಅನೇಕ ದೇಶಗಳು ಸ್ವಾವಲಂಬನೆಗೆ ಪ್ರಾಧಾನ್ಯ ನೀಡತೊಡಗಿದುವು. ಇಂಥ ಸಂರಕ್ಷಿತ ವಾಣಿಜ್ಯ ವ್ಯವಸ್ಥೆ ವ್ಯಾಪಕವಾಗುತ್ತ ಬಂದಂತೆ ಮುಕ್ತ ಅಂತರರಾಷ್ಟ್ರೀಯ ವ್ಯಾಪಾರಕ್ಕೆ ತೀವ್ರ ಧಕ್ಕೆಯುಂಟಾದ್ದು ಸಹಜವೇ. ಇದರಿಂದಾಗಿ ಅಂತರರಾಷ್ಟ್ರೀಯ ವ್ಯಾಪಾರದಲ್ಲಿ ಹೆಚ್ಚಿನ ಸಮನ್ವಯ ಸಾಧಿಸುವ ಅಗತ್ಯದ ಅರಿವು ಅನೇಕ ದೇಶಗಳಲ್ಲಿ ಮೂಡತೊಡಗಿತು. ಎರಡನೆಯ ಮಹಾಯುದ್ಧದ ಅನಂತರದ ಕಾಲದಲ್ಲಿ ಈ ಭಾವನೆ ಹೆಚ್ಚಿನ ಖಚಿತತೆ ತಳೆಯಿತು. ಆದರ ಫಲವಾಗಿ ರೂಪುಗೊಂಡ ಸಂಸ್ಥೆಯೇ ಅಂತರರಾಷ್ಟ್ರೀಯ ಹಣ ನಿಧಿ (ಇಂಟರ್‌ನ್ಯಾಷನಲ್ ಮಾನಿಟರಿ ಫಂಡ್).

### ಸ್ಥಾಪನೆ

1944ರ ಜುಲೈ ತಿಂಗಳಲ್ಲಿ ಬ್ರೆಟನ್‌ವುಡ್ಸ್‌ದಲ್ಲಿ (ಅಮೆರಿಕ ಸಂಯುಕ್ತ ಸಂಸ್ಥಾನ) ನಡೆದ ಸಂಯುಕ್ತ ರಾಷ್ಟ್ರಗಳ ಆರ್ಥಿಕ ಸಮ್ಮೇಳನದಲ್ಲಿ ಈ ಸಂಸ್ಥೆಯ ಒಪ್ಪಂದದ ನಿಯಮಾವಳಿಯನ್ನು ರೂಪಿಸಲಾಯಿತು. ಅಂತರರಾಷ್ಟ್ರೀಯ ಹಣ ನಿಧಿ 1945ರ ಡಿಸೆಂಬರ್ 27ರಂದು ಅಸ್ತಿತ್ವಕ್ಕೆ ಬಂದು ತನ್ನ ಚಟುವಟಿಕೆಗಳನ್ನು 1947ರ ಮಾರ್ಚ್ 1ರಂದು ಆರಂಭಿಸಿತು. ನಿಧಿಯ ಒಪ್ಪಂದದ ನಿಯಮಾವಳಿಯನ್ನು ಸ್ವೀಕರಿಸಿ ಅಂತರರಾಷ್ಟ್ರೀಯ ಹಣಕಾಸು ಸಹಕಾರ ಮತ್ತು ವಿಶ್ವ ವ್ಯಾಪಾರ ಅಭಿವೃದ್ಧಿಗೆ ಪ್ರಯತ್ನಿಸಲು ನಿರ್ಧರಿಸಿರುವ ರಾಷ್ಟ್ರಗಳ ಸಂಸ್ಥೆಯೇ ಅಂತರರಾಷ್ಟ್ರೀಯ ಹಣ ನಿಧಿ.

### ಸಂಸ್ಥೆಯ ಉದ್ದೇಶಗಳು

ಒಪ್ಪಂದದ ಒಂದನೆಯ ಪ್ರಕರಣದಲ್ಲಿ ಸಂಸ್ಥೆಯ ಉದ್ದೇಶಗಳನ್ನು ಸ್ಪಷ್ಟವಾಗಿ ತಿಳಿಸಲಾಗಿದೆ. ಅವನ್ನು ಸ್ಥೂಲವಾಗಿ ಹೀಗೆ ಪಟ್ಟಿಮಾಡಬಹುದು:

1 ಅಂತರರಾಷ್ಟ್ರೀಯ ಹಣಕಾಸು ಸಮಸ್ಯೆಗಳನ್ನು ಸದಸ್ಯ ರಾಷ್ಟ್ರಗಳ ಸಮಾಲೋಚನೆ ಮತ್ತು ಸಹಯೋಗದಿಂದ ಪರಿಹರಿಸಿಕೊಳ್ಳಲು ಒಂದು ಸಾಧನವಾಗುವುದು.

2 ಅಂತರರಾಷ್ಟ್ರೀಯ ವ್ಯಾಪಾರದ ವಿಕಾಸ ಮತ್ತು ಸರ್ವತೋಮುಖ ಬೆಳವಣಿಗೆಗೆ ಅನುವಾಗುವುದು ಮತ್ತು ಆ ಮೂಲಕ ಸದಸ್ಯ ರಾಷ್ಟ್ರಗಳಲ್ಲಿ ಸಂಪನ್ಮೂಲ, ಉದ್ಯೋಗ ಮತ್ತು ಆದಾಯವನ್ನು ಹೆಚ್ಚಿಸುವುದು.

3 ವಿಶ್ವ ವ್ಯಾಪಾರದಲ್ಲಿ ವಿದೇಶಿ ವಿನಿಮಯ ನಿರ್ಬಂಧಗಳನ್ನು ಸಾಧ್ಯವಾದಷ್ಟುಮಟ್ಟಿಗೆ ನಿವಾರಿಸಲು ಸಹಕರಿಸುವುದು.

4 ಸದಸ್ಯ ರಾಷ್ಟ್ರಗಳ ವಿನಿಮಯ ವ್ಯವಸ್ಥೆಯನ್ನು ಸುಗಮಗೊಳಿಸುವುದು ಮತ್ತು ವಿನಿಮಯ ಸ್ಥಿರತೆಯನ್ನು ಸಾಧಿಸುವುದು.

5 ನಿಧಿಯ ಮೂಲದಿಂದ ತಾತ್ಕಾಲಿಕವಾಗಿ ಸದಸ್ಯ ರಾಷ್ಟ್ರಗಳಿಗೆ ನೆರವು ನೀಡುವ ಮೂಲಕ ಅವುಗಳ ಪಾವತಿ ಶಿಲ್ಕಿನ ಸ್ಥಿತಿಯನ್ನು ಸರಿಪಡಿಸಿಕೊಳ್ಳಲು ನೆರವಾಗುವುದು.

6 ಮೇಲ್ಕಂಡ ಕ್ರಮಗಳಿಂದ ಅಂತರರಾಷ್ಟ್ರೀಯ ವ್ಯಾಪಾರದಲ್ಲಿ ಅಸಮತೋಲದ ಮಟ್ಟವನ್ನೂ ಅಸಮತೋಲದ ಅವಧಿಯನ್ನೂ ಕಡಮೆಮಾಡುವುದು.

**ಸದಸ್ಯತ್ವ**

ಒಪ್ಪಂದ ಜಾರಿಗೆ ಬಂದಾಗ 30 ಸದಸ್ಯ ರಾಷ್ಟ್ರಗಳಿದ್ದುವು. ಇಂದು ಸೋವಿಯತ್ ಒಕ್ಕೂಟ ಮತ್ತು ಪೂರ್ವ ಯೂರೋಪಿನ ದೇಶಗಳನ್ನುಳಿದು ಬಹುತೇಕ ಎಲ್ಲ ರಾಷ್ಟ್ರಗಳೂ ಸಂಸ್ಥೆಯ ಸದಸ್ಯತ್ವ ಹೊಂದಿವೆ. ಸಂಸ್ಥೆ ನಿಗದಿಪಡಿಸಿದ ವಂತಿಗೆಯನ್ನು ಸದಸ್ಯ ರಾಷ್ಟ್ರಗಳು ನೀಡಬೇಕು. ತನ್ನ ರಾಷ್ಟ್ರೀಯ ವರಮಾನ, ಹಣದ ಸಂಚಿತಿ (ರಾಷ್ಟ್ರದಲ್ಲಿರುವ ಚಿನ್ನ, ಡಾಲರ್ ಮತ್ತು ಸ್ಟರ್ಲಿಂಗ್ ಶಿಲ್ಕುಗಳು), ಅಂತರರಾಷ್ಟ್ರೀಯ ವ್ಯವಹಾರದಲ್ಲಿ ತನ್ನ ಪ್ರಾಮುಖ್ಯ ಮುಂತಾದ ಹಲವು ಅಂಶಗಳನ್ನು ಆಧರಿಸಿ ಸದಸ್ಯ ರಾಷ್ಟ್ರ ನೀಡಬೇಕಾದ ವಂತಿಗೆಯ ಪ್ರಮಾಣವನ್ನು ನಿಗದಿಪಡಿಸಲಾಗುವುದು. ಈ ವಂತಿಗೆಯಲ್ಲಿ ನಾಲ್ಕನೆಯ ಒಂದು ಭಾಗವನ್ನು ಚಿನ್ನದ ರೂಪದಲ್ಲಿ, ಉಳಿದದ್ದನ್ನು ತನ್ನ ನಾಣ್ಯದಲ್ಲಿ ಸದಸ್ಯರಾಷ್ಟ್ರ ನೀಡಬೇಕು.

**ಸಂಸ್ಥೆಯ ಆಡಳಿತ ವ್ಯವಸ್ಥೆ**

ಅಂತರರಾಷ್ಟ್ರೀಯ ಹಣ ನಿಧಿಯ ಅತ್ಯುಚ್ಚ ಅಧಿಕಾರ ರಾಷ್ಟ್ರಪ್ರತಿನಿಧಿಗಳ ಮಂಡಲಿಯಿಂದ ಚಲಾಯಿಸಲ್ಪಡುತ್ತದೆ. ಪ್ರತಿಯೊಂದು ರಾಷ್ಟ್ರವೂ ಮಂಡಲಿಯಲ್ಲಿ ಒಬ್ಬ ರಾಷ್ಟ್ರಪ್ರತಿನಿಧಿಯನ್ನು ಮತ್ತು ಬದಲಿ ಪ್ರತಿನಿಧಿಯನ್ನು ಹೊಂದಿರುತ್ತದೆ.

ಮಂಡಲಿಯ ಸಭೆ ವರ್ಷಕ್ಕೆ ಒಮ್ಮೆ ಮಾತ್ರವಾದುದರಿಂದ ಸಂಸ್ಥೆಯ ದೈನಂದಿನ ಚಟುವಟಿಕೆಗಳನ್ನು ನಡೆಸಲು ಅನುವಾಗುವಂತೆ ಮಂಡಲಿ ತನ್ನ ಅನೇಕ ಅಧಿಕಾರಗಳನ್ನು 'ಕಾರ್ಯನಿರ್ವಾಹಕ ಮಂಡಲಿ'ಗೆ ನಿಯೋಜಿಸಿರುತ್ತದೆ. ಅತ್ಯಂತ ಹೆಚ್ಚು ವಂತಿಗೆ ನೀಡುವ ಐದು ರಾಷ್ಟ್ರಗಳು ತಮ್ಮ ಪ್ರತಿನಿಧಿಗಳಾಗಿ ತಲಾ ಒಬ್ಬ ನಿರ್ದೇಶಕನನ್ನು ಕಾರ್ಯನಿರ್ವಾಹಕ ಮಂಡಲಿಗೆ ನೇಮಿಸುವ ಅಧಿಕಾರ ಹೊಂದಿರುತ್ತವೆ. ಈ ಐವರಲ್ಲದೆ ರಾಷ್ಟ್ರಪ್ರತಿನಿಧಿಗಳ ಮಂಡಲಿಯಿಂದ ಚುನಾಯಿತರಾದ ಹನ್ನೆರಡು ಮಂದಿಯೂ ಸೇರಿ ಕಾರ್ಯನಿರ್ವಾಹಕ ಮಂಡಲಿಯಲ್ಲಿ ಒಟ್ಟು 17 ಮಂದಿ ನಿರ್ದೇಶಕರಿರುತ್ತಾರೆ. ಸದಸ್ಯತ್ವ ನೀಡುವುದು, ವಂತಿಗೆಯ ಪ್ರಮಾಣವನ್ನು ಬದಲಾಯಿಸುವುದು ಮುಂತಾದ ಮುಖ್ಯ ವಿಷಯಗಳ ಬಗ್ಗೆ ನಿರ್ಧಾರ ಕೈಗೊಳ್ಳುವ ಅಧಿಕಾರ ರಾಷ್ಟ್ರಪ್ರತಿನಿಧಿಗಳ ಮಂಡಲಿಯದೇ ಆಗಿರುತ್ತದೆ.

**ಸಂಸ್ಥೆಯ ಕಾರ್ಯನಿರ್ವಹಣೆ**

**ಸಮಮೌಲ್ಯ ತತ್ವ:** ವಿನಿಮಯ ಸ್ಥಿರತೆಯನ್ನು ಸಾಧಿಸುವುದು ಸಂಸ್ಥೆಯ ಉದ್ದೇಶಗಳಲ್ಲಿ ಒಂದು. ಆದ್ದರಿಂದ ಪ್ರತಿಯೊಂದು ರಾಷ್ಟ್ರದ ನಾಣ್ಯಕ್ಕೂ ಅಮೆರಿಕದ ಡಾಲರು ಅಥವಾ ಒಂದು ನಿರ್ದಿಷ್ಟ ಪ್ರಮಾಣದ ಚಿನ್ನದಲ್ಲಿ ಬೆಲೆ ಕಟ್ಟಿ ಅನಂತರ ಪರಸ್ಪರ ವಿನಿಮಯ ದರವನ್ನು ಜಾರಿಗೆ ತರಲಾಯಿತು. ಹೀಗೆ ಒಂದು ನಾಣ್ಯಕ್ಕೆ ಕಟ್ಟಲಾದ ಬೆಲೆಯನ್ನು ಸಮಮೌಲ್ಯ (ಪಾರ್ ವ್ಯಾಲ್ಯೂ) ಎಂದು ಕರೆಯಲಾಯಿತು. ಸಮಮೌಲ್ಯ ತತ್ವವನ್ನು ಜಾರಿಗೆ ತಂದುದರಿಂದ ವಿನಿಮಯ ಸ್ಥಿರತೆಯನ್ನು ಸಾಧಿಸುವ ಪ್ರಯತ್ನ ಸ್ವಲ್ಪಮಟ್ಟಿಗೆ ಯಶಸ್ವಿಯಾಯಿತು. ಅಮೆರಿಕದ ಡಾಲರಿಗೆ ಸಾಪೇಕ್ಷವಾಗಿ ಒಂದು ರಾಷ್ಟ್ರ ತನ್ನ ನಾಣ್ಯದ ಮೌಲ್ಯವನ್ನು ಪರಿವರ್ತಿಸಬೇಕಾದರೆ ಆ ರಾಷ್ಟ್ರ ನಿಧಿಯ ಒಪ್ಪಿಗೆಯನ್ನು ಪಡೆಯಬೇಕು. ಸದಸ್ಯ ರಾಷ್ಟ್ರಗಳು ಸಮಮೌಲ್ಯದಲ್ಲಿ ಅಥವಾ ಸಮಮೌಲ್ಯದ ಸೇ 1 ರಷ್ಟು ಹೆಚ್ಚು/ಕಡಮೆ ದರದಲ್ಲಿ ಕೊಳ್ಳುವ/ಮಾರುವ ವ್ಯವಹಾರ ನಡೆಸಬೇಕು ಎಂದು ನಿರ್ಧಾರವಾಯಿತು.

**ಸದಸ್ಯ ರಾಷ್ಟ್ರಗಳಿಗೆ ಆರ್ಥಿಕ ನೆರವು:** ಪ್ರತಿಯೊಂದು ರಾಷ್ಟ್ರವೂ ತನ್ನ ವಂತಿಗೆಯ ಒಂದೂವರೆಯಷ್ಟು ಮೊತ್ತವನ್ನು ನಿಧಿಯಿಂದ ಸಾಲವಾಗಿ ಪಡೆಯಬಹುದು. ಹಣ ಪಡೆಯುವ ಹಕ್ಕನ್ನು 5 ಭಾಗಗಳಾಗಿ ವಿಂಗಡಿಸಲಾಗುತ್ತದೆ. ಮೊದಲ ಭಾಗ ಸದಸ್ಯ ರಾಷ್ಟ್ರ ನೀಡಿದ ಚಿನ್ನದ ಪ್ರಮಾಣಕ್ಕೆ ಸಮನಾದ ಮೊತ್ತ. ಸಂಪೂರ್ಣ ಸಾಲ ಸೌಲಭ್ಯ ಪಡೆಯಲಿಚ್ಛಿಸುವ ಸದಸ್ಯ ರಾಷ್ಟ್ರ ನಿಧಿಯ ಷರತ್ತುಗಳಿಗೆ ಒಪ್ಪಬೇಕಾಗುತ್ತದೆ.

ಸಾಲ ಪಡೆಯುವ ರಾಷ್ಟ್ರಗಳ ಆರ್ಥಿಕ ಸ್ಥಿತಿಯನ್ನು ಗಂಭೀರವಾಗಿ ಅಧ್ಯಯನ ಮಾಡಿದ ಬಳಿಕ ಆ ರಾಷ್ಟ್ರಗಳ ಆರ್ಥಿಕ ರಚನೆಯಲ್ಲಿ ಮೂಲಭೂತವಾದ ಲೋಪ ದೋಷಗಳಿದ್ದರೆ ಆ ಬಗ್ಗೆ ಯುಕ್ತ ಕ್ರಮ ಕೈಗೊಳ್ಳಲು ಆದೇಶ ನೀಡುವುದು. ರಾಷ್ಟ್ರದ ಆಂತರಿಕ ಅರ್ಥವ್ಯವಸ್ಥೆಯನ್ನು ಸುಭದ್ರವಾಗಿ ಪುನರ್ರೂಪಿಸುವ ಆವಶ್ಯಕತೆ ಕಂಡು ಬಂದಲ್ಲಿ ಸಲಹೆ ನೀಡುವುದು. ಅಂತರರಾಷ್ಟ್ರೀಯ ಹಣ ನಿಧಿಯಿಂದ ಬ್ರಿಟನ್, ಪಾಕಿಸ್ತಾನ, ತುರ್ಕಿ, ಭಾರತ ಮುಂತಾದ ಅನೇಕ ದೇಶಗಳು ಸಾಕಷ್ಟು ಉಪಕೃತವಾಗಿವೆ.

**ವಿಶೇಷ ಡ್ರ್ಯಾಯಿಂಗ್ ಹಕ್ಕು:** ಅಂತರರಾಷ್ಟ್ರೀಯ ದ್ರವ್ಯತೆಯನ್ನು ಹೆಚ್ಚಿಸಲು ನಿಧಿ 1969ರ ಜುಲೈ ತಿಂಗಳಲ್ಲಿ 'ವಿಶೇಷ ಡ್ರ್ಯಾಯಿಂಗ್ ಹಕ್ಕುಗಳು' (ಸ್ಪೆಷಲ್ ಡ್ರ್ಯಾಯಿಂಗ್ ರೈಟ್ಸ್–ಎಸ್‌ಡಿಆರ್) ಎಂಬ ಮತ್ತೊಂದು ವ್ಯವಸ್ಥೆಯನ್ನು ಜಾರಿಗೆ ತಂದಿತು. ಪ್ರತಿಯೊಂದು ಸದಸ್ಯ ರಾಷ್ಟ್ರದ ಖಾತೆಗೂ ಅದರ ವಂತಿಗೆಯನ್ನು ಆಧರಿಸಿ ಒಂದು ನಿರ್ದಿಷ್ಟ ಮೊಬಲಗನ್ನು 'ಜಮಾ' ಮಾಡಲಾಗುತ್ತದೆ. ಪಾವತಿ ಸಿಲ್ಕಿನ ವೈಪರೀತ್ಯದಿಂದ (ಎಂದರೆ ಒಂದು ದೇಶಕ್ಕೆ ಬರಬೇಕಾದ ಹಣಕ್ಕಿಂತ ಅದು ಕೊಡಬೇಕಾದ್ದೇ ಅಧಿಕವಾಗಿರುವುದು) ತೊಂದರೆ ಅನುಭವಿಸುತ್ತಿರುವ ದೇಶ ಈ ಜಮೆಯನ್ನು ಉಪಯೋಗಿಸಿಕೊಳ್ಳುವ ವಿಶೇಷ ಹಕ್ಕನ್ನು ಪಡೆದಿರುತ್ತದೆ. ವಿಶೇಷ ಡ್ರ್ಯಾಯಿಂಗ್ ಹಕ್ಕಿನ ಒಂದು ಘಟಕವನ್ನು ಅಮೆರಿಕನ್ ಡಾಲರಿನ ಪ್ರಸ್ತುತ ಚಿನ್ನದ ಬೆಲೆಗೆ ಸಮ ಎಂದು ಪರಿಗಣಿಸಲಾಗುತ್ತದೆ.

**ವಿಶೇಷ ಡ್ರ್ಯಾಯಿಂಗ್ ಹಕ್ಕುಗಳ ಸ್ವರೂಪ**

1 ಅಂತರರಾಷ್ಟ್ರೀಯ ವಿನಿಮಯ ಮಾರುಕಟ್ಟೆಯಲ್ಲಿ ಇವುಗಳ ಮಾರಾಟವಿಲ್ಲ. ಆದರೆ ವಿದೇಶಿ ವಿನಿಮಯವನ್ನು ಪಡೆಯಲು ಇವನ್ನು ರಾಷ್ಟ್ರದ ಕೇಂದ್ರ ಬ್ಯಾಂಕಿಗೆ ಸುಲಭವಾಗಿ ವರ್ಗಾಯಿಸಬಹುದು.

2 ತನಗೆ ನೀಡಲಾದ ವಿಶೇಷ ಡ್ರ್ಯಾಯಿಂಗ್ ಹಕ್ಕುಗಳಲ್ಲಿ ಸೇ 70ನ್ನು ಸದಸ್ಯ ರಾಷ್ಟ್ರ 3ರಿಂದ 5 ವರ್ಷಗಳೊಳಗೆ ಉಪಯೋಗಿಸಿಕೊಳ್ಳಬಹುದು.

3 ಒಂದು ರಾಷ್ಟ್ರ ಇನ್ನೊಂದು ರಾಷ್ಟ್ರಕ್ಕೆ ವಿಶೇಷ ಡ್ರ್ಯಾಯಿಂಗ್ ಹಕ್ಕುಗಳಲ್ಲಿ ಹಣ ಪಾವತಿ ಮಾಡಬಹುದು.

4 ತನಗೆ ನಿಧಿ ನೀಡಿದ ವಿಶೇಷ ಡ್ರ್ಯಾಯಿಂಗ್ ಹಕ್ಕುಗಳಿಗಿಂತ ಹೆಚ್ಚಿನ ಮೊತ್ತದ ವಿಶೇಷ ಡ್ರ್ಯಾಯಿಂಗ್ ಹಕ್ಕುಗಳುಳ್ಳ ರಾಷ್ಟ್ರಗಳು ಹೆಚ್ಚಿನ ಮೊತ್ತಕ್ಕೆ ಸಂಸ್ಥೆಯಿಂದ ಸಾಮಾನ್ಯವಾಗಿ ಸೇ. 1½ಯಷ್ಟು ಬಡ್ಡಿ ಪಡೆಯುತ್ತವೆ. ವಿಶೇಷ ಡ್ರ್ಯಾಯಿಂಗ್ ಸೌಕರ್ಯ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಬಳಕೆಗೆ ಬಂದುದು ಒಂದು ಪ್ರಮುಖ ಬದಲಾವಣೆ. ಅಂತರರಾಷ್ಟ್ರೀಯ ನಾಣ್ಯಗಳಲ್ಲಿ ಮುಖ್ಯವಾದ ಡಾಲರ್, ಪೌಂಡ್ ಸ್ಟರ್ಲಿಂಗ್‌ಗಳ ಬದಲಾಗಿ ಇದು ಜಾರಿಗೆ ಬಂದು 'ಕಾಗದದ ಚಿನ್ನ' ಎಂಬ ಸಂಬೋಧನೆಯನ್ನು ಗಳಿಸಿಕೊಂಡಿತು. 1960ರ ದಶಕದಲ್ಲಿ ವಿಶ್ವ ಸಂಚಿತಿ ಹಣದ ಹೆಚ್ಚಳ ಅಂತರರಾಷ್ಟ್ರೀಯ ವ್ಯಾಪಾರದ ಪ್ರಮಾಣದಲ್ಲಿಯ ಹೆಚ್ಚಳಕ್ಕಿಂತ ತೀರ ಕಡಮೆ ಇದ್ದು ಈ ದ್ರವ್ಯತೆಯ ಕೊರತೆಯಿಂದ ವಿಶ್ವ ವ್ಯಾಪಾರ ಕುಸಿಯಬಹುದು ಎಂಬ ಭೀತಿಯಿಂದ ಇದನ್ನು ಜಾರಿಗೆ ತರಲಾಯಿತು. ಮೊದಲು 16 ದೇಶಗಳ ನಾಣ್ಯಗಳ ಮೌಲ್ಯಗಳ ಆಧಾರದ ಮೇಲೆ ವಿಶೇಷ ಡ್ರ್ಯಾಯಿಂಗ್ ಹಕ್ಕುಗಳ ದರವನ್ನು ನಿರ್ಧರಿಸಲಾಗುತ್ತಿತ್ತು. ಆದರೆ ಈಗ ಮುಖ್ಯವಾದ 5 ನಾಣ್ಯಗಳ ಮೌಲ್ಯಗಳ ಆಧಾರದ ಮೇಲೆ ವಿಶೇಷ ಡ್ರ್ಯಾಯಿಂಗ್ ಹಕ್ಕುಗಳ ಮೌಲ್ಯವನ್ನು ನಿರ್ಧರಿಸಲಾಗುತ್ತದೆ.

ಪ್ರತಿಯೊಂದು ಸದಸ್ಯ ರಾಷ್ಟ್ರಕ್ಕೂ ಅದರ ವ್ಯಾಪಾರದ ಪ್ರಮಾಣವನ್ನು ಆಧರಿಸಿ ನಿರ್ದಿಷ್ಟ ಪ್ರಮಾಣದ ವಿಶೇಷ ಡ್ರ್ಯಾಯಿಂಗ್ ಹಕ್ಕುಗಳು ಲಭ್ಯವಾಗುತ್ತವೆ. ಈಗ ಅಭಿವೃದ್ಧಿಶೀಲ ರಾಷ್ಟ್ರಗಳ ನೆರವಿನ ಪ್ರಮಾಣವನ್ನು ಹೆಚ್ಚಿಸುವ ಹಿನ್ನೆಲೆಯಲ್ಲಿ ಈ ಕೋಟಾಗಳನ್ನು ಪರಿಶೀಲಿಸಬೇಕೆಂದು ನಿರ್ಧರಿಸಲಾಗಿದೆ.

**ಅಸ್ಥಿರತೆಯ ಆರಂಭ**

ಅಂತರರಾಷ್ಟ್ರೀಯ ಹಣಕಾಸು ಮಾರುಕಟ್ಟೆಯ ವಿನಿಮಯ ಸ್ಥಿರತೆ 1971ರಲ್ಲಿ ಅಲುಗಾಡಲಾರಂಭಿಸಿತು. ಅಮೆರಿಕದಲ್ಲಿ ಹಣದುಬ್ಬರ ಉಂಟಾಗಿ ಅದರ ಪಾವತಿ ಸಿಲ್ಕಿನ ಖೋತಾ ಮುಗಿಲಿಗೇರಿತು. ಅಮೆರಿಕದ ಡಾಲರುಗಳನ್ನು ಹೆಚ್ಚಾಗಿ ಹೊಂದಿದ್ದ ಹಲವು ರಾಷ್ಟ್ರಗಳು ಅದನ್ನು ಚಿನ್ನಕ್ಕೆ ಪರಿವರ್ತಿಸಲಾರಂಭಿಸಿದುವು. ಆಗ ಅಮೆರಿಕ ಸರ್ಕಾರ ಡಾಲರನ್ನು ಬಲಪಡಿಸಲು ಹಲವು ಕ್ರಮಗಳನ್ನು ಕೈಗೊಂಡಿತು. ಅವುಗಳಲ್ಲಿ ಬಹು ಮುಖ್ಯವಾದುದೆಂದರೆ ಡಾಲರನ್ನು ಚಿನ್ನಕ್ಕೆ ಪರಿವರ್ತಿಸುವುದನ್ನು ನಿಷೇಧಿಸಿದ್ದು. ಆದರೂ ಪರಿಸ್ಥಿತಿ ಹತೋಟಿಗೆ ಬರದೆ ಎರಡು ವರ್ಷಗಳಲ್ಲಿ ಎರಡು ಬಾರಿ ಡಾಲರನ್ನು ಅಪಮೌಲ್ಯಗೊಳಿಸಲಾಯಿತು.

**ಅಭಿವೃದ್ಧಿಶೀಲ ರಾಷ್ಟ್ರಗಳ ಪಾಡು**

1973–74ರಲ್ಲಿ ತೈಲ ಬೆಲೆಯಲ್ಲಿ ಗಣನೀಯ ಏರಿಕೆಯುಂಟಾದುದು ಅನೇಕ ರಾಷ್ಟ್ರಗಳಿಗೆ ವಿನಿಮಯ ಸಮಸ್ಯೆಗಳನ್ನು ತಂದೊಡ್ಡಿತು. ಅಭಿವೃದ್ಧಿಶೀಲ ದೇಶಗಳು ತಮ್ಮ ಅಮೂಲ್ಯ ವಿದೇಶಿ ವಿನಿಮಯದ ಸೇ.30–40ರಷ್ಟನ್ನು ಕೇವಲ ತೈಲಕ್ಕಾಗಿಯೇ ವ್ಯಯಿಸಬೇಕಾಯಿತು. ಹೀಗಾಗಿ ಆ ದೇಶಗಳ ಪಾವತಿ ಸಿಲ್ಕಿನ ಪರಿಸ್ಥಿತಿ ಪ್ರತಿಕೂಲವಾಗತೊಡಗಿತು.

ಈ ಸಮಯದಲ್ಲಿ ಅನೇಕ ರಾಷ್ಟ್ರಗಳು ವಿದೇಶಿ ವಿನಿಮಯ ಮಾರುಕಟ್ಟೆಯಲ್ಲಿಯ ಏರುಪೇರುಗಳನ್ನು ಎದುರಿ

ಸಲು ಕ್ರಮ ಕೈಗೊಂಡವು. ಅಂತರರಾಷ್ಟ್ರೀಯ ಹಣ ನಿಧಿಯು ಸಮ ಮೌಲ್ಯ ತತ್ವಕ್ಕೆ ಪ್ರಾಧಾನ್ಯ ಕಡಮೆಯಾಯಿತು. ಸಮ ಮೌಲ್ಯದ ಆಚೀಚೆ ಶೇ. 2¼ರ ವರೆಗೂ ವ್ಯವಹಾರ ನಡೆಸಬಹುದೆಂದು ನಿಧಿ ತೀರ್ಮಾನಿಸಿತಾದರೂ ಪರಿಸ್ಥಿತಿ ಹತೋಟಿಗೆ ಬರಲಿಲ್ಲ. ಕೆಲವು ರಾಷ್ಟ್ರಗಳಂತೂ (ಇಂಗ್ಲೆಂಡ್, ಫ್ರಾನ್ಸ್, ಜಪಾನ್, ಇಟಲಿ ಮುಂತಾದವು) ತಮ್ಮ ನಾಣ್ಯವನ್ನು ವಿನಿಮಯ ಮಾರುಕಟ್ಟೆಯಲ್ಲಿ ಅನಿರ್ಬಂಧಿತವಾಗಿ ತೇಲಬಿಟ್ಟವು.

ಸಮಮೌಲ್ಯ ತತ್ವ, ವಿಶೇಷ ಡ್ರಾಯಿಂಗ್ ಹಕ್ಕುಗಳು ಮೊದಲಾದ ಯಾವ ವ್ಯವಸ್ಥೆಯೂ ನಿಧಿಯ ಉದ್ದೇಶವನ್ನು ಸಂಪೂರ್ಣವಾಗಿ ಈಡೇರಿಸುವುದರಲ್ಲಿ ಯಶಸ್ವಿಯಾಗಲಿಲ್ಲ. ಇಂದು ಅಂತರರಾಷ್ಟ್ರೀಯ ವಿನಿಮಯ ಮಾರುಕಟ್ಟೆಯಲ್ಲಿ ಸ್ಥಿರತೆಯನ್ನು ತರಲು ಎಲ್ಲ ಸರ್ಕಾರಗಳೂ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಗಳೂ ದೀರ್ಘಕಾಲಿಕ ಕ್ರಮಗಳನ್ನು ಜಾರಿಗೆ ತರಲು ಆಲೋಚಿಸಬೇಕಾಗಿದೆ.

## ಸಮಸ್ಯೆಯ ಮೂಲ

ಇಲ್ಲಿಯ ಮುಖ್ಯ ಸಮಸ್ಯೆಯೆಂದರೆ ಶ್ರೀಮಂತ ರಾಷ್ಟ್ರಗಳ ಮತ್ತು ಬಡ ರಾಷ್ಟ್ರಗಳ ನಡುವಿನ ಘರ್ಷಣೆ. ಸಮತೋಲವನ್ನು ಸಾಧಿಸಬಯಸುವ ಯಾವುದೇ ಪ್ರಯತ್ನ ಈ ಗುಂಪುಗಳಲ್ಲೊಂದರ ಆಸಕ್ತಿಗೆ ಧಕ್ಕೆ ತರುವ ಸಾಧ್ಯತೆಗಳಿವೆ. ಅಂತರರಾಷ್ಟ್ರೀಯ ಹಣನಿಧಿ ಮೂಲತಃ ಶ್ರೀಮಂತ ರಾಷ್ಟ್ರಗಳ ಹತೋಟಿಯಲ್ಲಿರುವುದರಿಂದ ಈ ಸಮಸ್ಯೆ ಇನ್ನೂ ತೀವ್ರವಾಗುತ್ತದೆ.

ಮೂರನೆಯ ಪ್ರಪಂಚ ಎನ್ನಿಸಿಕೊಳ್ಳುವ, ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳ ಸ್ಥಿತಿ ಸಂದಿಗ್ಧ. ಪ್ರಗತಿಯ ಹಾದಿ ಕಠಿಣವೇ ತಾನೆ? ಅಧಿಕವಾಗಿ ಯಂತ್ರೋಪಕರಣಗಳ ಮತ್ತು ಏರುತ್ತಿರುವ ಬೆಲೆಯಲ್ಲಿ ತೈಲದ ಆಮದು ಬಹುತೇಕ ಎಲ್ಲ ಅಭಿವೃದ್ಧಿಶೀಲ ರಾಷ್ಟ್ರಗಳ ಸಮಸ್ಯೆ. ಇದಲ್ಲದೆ ದೇಶದಲ್ಲಿ ರಚನಾತ್ಮಕ ಚಟುವಟಿಕೆಗಳಿಗೆ ಅಧಿಕವಾಗಿ ಹಣ ತೊಡಗಿಸಬೇಕು. ಆದ್ದರಿಂದ ಅನೇಕ ಬಗೆಯ ಆರ್ಥಿಕ ಸಮಸ್ಯೆಗಳು ಅಭಿವೃದ್ಧಿಶೀಲ ದೇಶಗಳನ್ನು ಕಾಡುವುವು ಎಂಬುದನ್ನು ಸುಲಭವಾಗಿ ಅರ್ಥಮಾಡಿಕೊಳ್ಳಬಹುದು. ತೀರ ಹಿಂದುಳಿದ ದೇಶಗಳಿಗೂ ಮುಂದುವರಿದ ದೇಶಗಳಿಗೂ ಈ ಸಮಸ್ಯೆ ಇಷ್ಟು ಮಹತ್ವದ್ದಾಗಿರುವುದಿಲ್ಲ.

## ನಿಧಿ ಮತ್ತು ಭಾರತ

ಭಾರತದ ಮಟ್ಟಿಗೆ ಹೇಳುವುದಾದರೆ, ನಿಧಿಯಿಂದ ಅದು ಸಾಕಷ್ಟು ನೆರವು ಪಡೆದಿದೆಯೆಂದೇ ಹೇಳಬೇಕು. 1966ರಲ್ಲಿ ನಿಧಿ ಭಾರತದ ನೆರವಿಗೆ ಬಂತು. ಆಮದುಗಳಲ್ಲಿ ಕಡಿತ ಮಾಡಿ ರಫ್ತುಗಳನ್ನು ಪ್ರೋತ್ಸಾಹಿಸಿ ಭಾರತವನ್ನು ಸಂಕಟದಿಂದ ಪಾರುಮಾಡಿತು. ಜೊತೆಗೆ ದುರದೃಷ್ಟಕರವೆನ್ನಿಸುವ ರೂಪಾಯಿಯ ಮೌಲ್ಯಛೇದನಕ್ಕೂ ನಿಧಿ ಕಾರಣವಾಯಿತು. ಭಾರತದ ರೂಪಾಯಿಯ ಮೌಲ್ಯಛೇದನವೆಂದರೆ ರೂಪಾಯಿಯ ಮೌಲ್ಯ ಇತರ ರಾಷ್ಟ್ರಗಳ ನಾಣ್ಯಗಳಲ್ಲಿ ಕಡಮೆಯಾಗುವುದು. ಎಂದರೆ ಆಮದಾದ ಸರಕಿಗೆ ನಾವು ತೆರಬೇಕಾದ ಹಣ ಹೆಚ್ಚುವುದು ಮತ್ತು ರಫ್ತು ಮಾಡಿದ ಸರಕಿಗೆ ಪಡೆಯುವ ಹಣ ತಗ್ಗುವುದು. ಇದರಿಂದ ಭಾರತಕ್ಕೆ ಒಂದು ರೀತಿಯ ಮುಖಭಂಗವಾದಂತಾಯಿತು. ನಿಧಿಯ ಸಾಲದಿಂದ ತಾತ್ಕಾಲಿಕವಾಗಿ ಅನುಕೂಲವಾದರೂ, ಅದರ ದೀರ್ಘಕಾಲಿಕ ಪರಿಣಾಮದಿಂದ ಚೇತರಿಸಿಕೊಳ್ಳಲು ಭಾರತಕ್ಕೆ ಹಲವು ವರ್ಷಗಳೇ ಬೇಕಾದುವು.

ಈಗ ಮತ್ತೊಮ್ಮೆ ಭಾರತ ನಿಧಿಯಿಂದ ಅಗಾಧ ಮೊತ್ತದ ಸಾಲವನ್ನು ಯಾಚಿಸಿ ಪಡೆದಿದೆ. ಭಾರತದ ದೈನ್ಯ, ನಿಧಿಯ ಧೋರಣೆ, ನಿಧಾನ ತಂತ್ರ, ಷರತ್ತುಗಳು ಎಲ್ಲ ಮುಗಿದುಹೋದ ಘಟನೆಗಳು. ಮೌಲ್ಯಛೇದನಕ್ಕೆ ಈಗಿನ ಪರಿಸ್ಥಿತಿಯಲ್ಲಿ ಅರ್ಥವಿಲ್ಲ. ಬಹುಶಃ 1966 ರಲ್ಲಿ ಕಲಿತ ಪಾಠವನ್ನು ನಮ್ಮ ನಾಯಕರು ಮರೆತಿರಲಿಕ್ಕಿಲ್ಲ. ರೂಪಾಯಿಯ ಮೌಲ್ಯ ಛೇದನ ಇಲ್ಲದಿದ್ದರೂ ನಿಧಿಯ ಇತರ ಷರತ್ತುಗಳು ಆಂತರಿಕ ಆರ್ಥಿಕ ಸ್ವಾತಂತ್ರ್ಯ ಹರಣವೇ ಎನ್ನುವಷ್ಟು ಕಠಿಣವಾದವು. ಋಣನಿಯಂತ್ರಣ, ಸಾರ್ವಜನಿಕ ಕ್ಷೇತ್ರದ ಅನೇಕ ಕೈಗಾರಿಕೆಗಳನ್ನು ಅಗತ್ಯ ಸೇವೆಯೆಂದು ಪರಿಗಣಿಸುವ ಸುಗ್ರೀವಾಜ್ಞೆ, ಅಗತ್ಯ ಸೇವೆಗಳಲ್ಲಿ ಮುಷ್ಕರ ನಿಷೇಧ, ಹಲವು ಸರಕುಗಳ ಬೆಲೆ ನಿರ್ಧಾರಣ ನೀತಿಯ ತ್ಯಾಗ, ನಿಯಂತ್ರಣದ ರದ್ದು, ಆಮದು ನಿರ್ಬಂಧದ ಸಡಿಲಿಕೆ ಮುಂತಾದ ಕ್ರಮಗಳು ನಿಧಿಯಿಂದ ಬಂದ ಆದೇಶದ ಫಲವೋ ಅಥವಾ ನಿಧಿಯ ಮನ ವೊಲಿಸಲು ಭಾರತ ತಾನಾಗಿ ಕೈಗೊಂಡಂಥವೊ? ಭಾರಿಯ ಮೊತ್ತದ ಸಾಲ ಬೇಕಾದರೆ ತೀವ್ರತರವಾದ ಷರತ್ತುಗಳಿರಬಹುದೆಂದು ನಂಬಲು ಕಾರಣವಿಲ್ಲದಿಲ್ಲ.

## ನಿಧಿಯ ವಿಫಲತೆ

ಭಾರತದ ಈ ನಿದರ್ಶನದಿಂದ ಅಂತರರಾಷ್ಟ್ರೀಯ ಹಣ ನಿಧಿ ಅಭಿವೃದ್ಧಿಶೀಲ ರಾಷ್ಟ್ರಗಳ ಬಗ್ಗೆ ತಳೆದಿರುವ ಧೋರಣೆಯನ್ನು ಅರ್ಥಮಾಡಿಕೊಳ್ಳಬಹುದು. ಅಭಿವೃದ್ಧಿಶೀಲ ರಾಷ್ಟ್ರಗಳು ಶೋಷಣೆಗೆ ಒಳಗಾಗುವ ಸಾಧ್ಯತೆಗಳಿವೆ. ನೆರವಿಗೆ ಕೈಯೊಡ್ಡಲೇಬೇಕಾದ ಅನಿವಾರ್ಯ ಪರಿಸ್ಥಿತಿಯಲ್ಲಿರುವ ರಾಷ್ಟ್ರಗಳು ಷರತ್ತುಗಳ ವಿರುದ್ಧ ಪ್ರತಿಭಟಿಸುವುದು ಹೇಗೆ? ನಿಧಿಯ ಬಗ್ಗೆ ಹೇಳುತ್ತ ಸಿ. ಎಲ್. ಡೇ ಅವರು "ಎರಡನೆಯ ಮಹಾಯುದ್ಧದ ಅನಂತರದ ದಿನಗಳಲ್ಲಿ ಸ್ಥಾಪಿತವಾದ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಗಳಲ್ಲಿ ಅತ್ಯಂತ ಆಶಾದಾಯಕವಾದ ಆದರೆ ಅತಿ ಕಡಮೆ ಪ್ರಗತಿ ಸಾಧಿಸಿರುವ ಸಂಸ್ಥೆ" ಎಂದು ಇದನ್ನು ವರ್ಣಿಸಿದ್ದಾರೆ.

**ವಿಫಲತೆಗೆ ಕಾರಣ**

ಮೇಲಿನ ವಿವರಣೆಯಿಂದ ಅಂತರರಾಷ್ಟ್ರೀಯ ಹಣ ನಿಧಿಯ ಬಗ್ಗೆ ಅನಾದರ ಮೂಡುವ ಸಾಧ್ಯತೆಯಿದೆ. ಆದರೆ ನಿಧಿಯ ವಿಫಲತೆಗಳ ಹಲವು ಕಾರಣಗಳನ್ನು ಸಹಾನುಭೂತಿಯಿಂದ ಗಮನಿಸುವುದು ಒಳ್ಳೆಯದು.

1 ಸಂಪನ್ಮೂಲಗಳ ಕೊರತೆ ನಿಧಿಗೆ ಒಂದು ದೊಡ್ಡ ಸವಾಲು. ವಿಶ್ವ ವ್ಯಾಪಾರ ಏರುತ್ತಿದ್ದು ತನ್ಮೂಲಕ ಏರುತ್ತಿರುವ ಸದಸ್ಯ ರಾಷ್ಟ್ರಗಳ ಬೇಡಿಕೆಯನ್ನು ನೀಗಿಸಲು ನಿಧಿಗೆ ಇದೊಂದು ಅಡಚಣೆ. ಎಲ್ಲರೂ ಸಾಲ ಕೇಳುವವರೇ ಆದರೆ ಹೇಗೆ? ಬಂಡವಾಳವನ್ನು ದ್ವಿಗುಣಗೊಳಿಸುವ ದಿಟ್ಟ ಕ್ರಮ ಕೈಗೊಂಡರೂ ಈ ಸಮಸ್ಯೆ ಪರಿಹಾರವಾಗಿಲ್ಲ ವೆಂದರೆ ಸಮಸ್ಯೆಯ ಆಳದ ಅರಿವಾಗುತ್ತದೆ.

2 ವಿಶೇಷ ಡ್ರಾಯಿಂಗ್ ಹಕ್ಕುಗಳು, ಕೈಗಾವಲು ಉದರಿ (ಸ್ಟ್ಯಾಂಡ್-ಬೈ ಕ್ರೆಡಿಟ್) ಇವನ್ನು ಜಾರಿಗೆ ತಂದರೂ ಅಂತರರಾಷ್ಟ್ರೀಯ ದ್ರವ್ಯತೆಯ ಸಮಸ್ಯೆಯನ್ನು ಪರಿಹರಿಸಲು ಸಾಧ್ಯವಾಗಿಲ್ಲ.

3 ನಿಧಿಯ ಷರತ್ತುಗಳು ಸಾಲ ಪಡೆಯುವ ರಾಷ್ಟ್ರಗಳಿಗೆ ಅಸಂತುಷ್ಟಿಯನ್ನುಂಟುಮಾಡಿದೆ. ಆದರೆ ಹೀಗೆ ಮಾಡದ ನಿಧಿಗೆ ಅನ್ಯಮಾರ್ಗವಿಲ್ಲ.

4 ಸಾಲ ಪಡೆಯುವ ರಾಷ್ಟ್ರಗಳು ಸಮಸ್ಯೆಗಳನ್ನು ಪೂರ್ಣವಾಗಿ ಅಧ್ಯಯನ ಮಾಡಲು ಹಾಗೂ ನಿವಾರಿಸಲು ಸಾಧ್ಯವಾಗುವುದಿಲ್ಲ. ಈ ಸಮಸ್ಯೆಯ ಜಟಿಲತೆಯನ್ನು ಅರ್ಥಮಾಡಿಕೊಂಡರೆ ನಿಧಿಯಿಂದ ಹೆಚ್ಚು ನಿರೀಕ್ಷಿಸಬಾರದು ಎನ್ನಿಸುತ್ತದೆ.

5 ಸಂಸ್ಥೆಯ ಆಡಳಿತಯಂತ್ರ ನಿಧಾನಗತಿಯಿಂದ ಸಾಗುತ್ತದೆ. ಗವರ್ನರುಗಳ ಮಂಡಲಿಯಲ್ಲಿ ಎಲ್ಲ ರಾಷ್ಟ್ರಗಳ ಪ್ರತಿನಿಧಿಗಳೂ ಇರುವುದರಿಂದ ನಿರ್ಣಯಗಳನ್ನು ಕೈಗೊಳ್ಳ ಬೇಕಾದಾಗ ನಡೆಯುವ ಚರ್ಚೆಗಳಿಂದ ಸಮಸ್ಯೆಗಳು ಇನ್ನಷ್ಟು ಜಟಿಲವಾಗುತ್ತವೆ. ಅಂತೂ ಶೀಘ್ರ ನಿರ್ಧಾರ ಕೈಗೊಳ್ಳುವ ಹಾದಿಯಲ್ಲಿ ಆಡಳಿತ ವ್ಯವಸ್ಥೆ ಮುಳ್ಳಾಗಿದೆಯೆಂಬುದು ನಿಧಿಯ ಬಗ್ಗೆ ಒಂದು ಸಾಮಾನ್ಯ ಆರೋಪ.

**ನಿಧಿಯ ಸಾಧನೆ**

ಹಾಗಾದರೆ ನಿಧಿ ಏನು ಸಾಧಿಸಿತು ಎಂಬ ಪ್ರಶ್ನೆಗೂ ಸಾಕಷ್ಟು ಉತ್ತೇಜಕವಾದ ಉತ್ತರವಿದೆ.

1 ಸದಸ್ಯರಾಷ್ಟ್ರಗಳ ಅನಾವಶ್ಯಕ ವಿದೇಶಿ ವಿನಿಮಯ ನಿಯಂತ್ರಣಗಳನ್ನು ನಿವಾರಿಸಲು ನಿಧಿ ಉತ್ತೇಜಿಸಿದೆ.

2 ಅಭಿವೃದ್ಧಿಶೀಲ ರಾಷ್ಟ್ರಗಳಿಗೆ—ಅಪೇಕ್ಷಿತ ಮಟ್ಟದಲ್ಲಿ ಅಲ್ಲದಿದ್ದರೂ—ಹಣಕಾಸಿನ ಸಹಾಯ ನೀಡಿ ವಿಶ್ವ ವ್ಯಾಪಾರದ ಅಭಿವೃದ್ಧಿಯಲ್ಲಿ ಪಾತ್ರ ವಹಿಸಿದೆ.

3 ಹಲವು ಸಂದರ್ಭಗಳಲ್ಲಿ, ಅನೇಕ ತೊಂದರೆಗಳ ದ್ವಾರಾ, ವಿನಿಮಯ ಸ್ಥಿರತೆಯನ್ನು ಕಾಪಾಡುವಲ್ಲಿ ಯಶಸ್ವಿಯಾಗಿದೆ.

4 ಬೆಲೆಗಳ ನಿರ್ಧಾರವನ್ನು ಮಾರ್ಕೆಟ್ ಬಲಗಳಿಗೆ ಬಿಡುವಂತೆ ನಿಧಿ ಒತ್ತಾಯಿಸಿದೆ. ಸರ್ಕಾರ ಕೃತಕವಾಗಿ ಬೆಲೆ ನಿರ್ಧರಿಸಿದರೆ ಕಪ್ಪು ಹಣ ಕಾಳಸಂತೆ ಬೆಳೆಯುತ್ತವೆ.

5 ಸರ್ಕಾರಿ ಕ್ಷೇತ್ರದಲ್ಲಿ ಲಾಭಕರ ಬೆಲೆ ಘೋಷಿಸಿ ನಷ್ಟ ತಡೆಯುವಂತೆ ನಿಧಿ ನೆರವು ಪಡೆದ ರಾಷ್ಟ್ರಗಳಿಗೆ ಮಾಡುವ ತಾಕೀತು ಒಳ್ಳೆಯದಕ್ಕೇ. ಸರ್ಕಾರಿ ವ್ಯವಸ್ಥೆಯೊಂದನ್ನು ನಷ್ಟದಲ್ಲಿ ನಡೆಯಿಸುವ ಬದಲು ಖಾಸಗಿ ಕ್ಷೇತ್ರಗಳಿಗೆ ಅವನ್ನು ಬಿಟ್ಟುಕೊಡಬೇಕೆಂಬ ನಿಧಿಯ ಒತ್ತಾಯವೂ ಕೆಲವೇಳೆ ಒಳ್ಳೆಯ ಪರಿಣಾಮ ಬೀರಿದೆ.

6 ನೆರವು ಪಡೆದ ರಾಷ್ಟ್ರಗಳ ಆಮದಿನ ಕಡಿತ ಮಾಡಿ ರಫ್ತು ಅಭಿವೃದ್ಧಿಗೆ ಉತ್ತೇಜನ ನೀಡಿರುವ ಹಲವಾರು ಉದಾಹರಣೆಗಳಿವೆ.

ಒಟ್ಟಿನಲ್ಲಿ ನಿಧಿಯ ಧ್ಯೇಯ ಧೋರಣೆಗಳು ತಾತ್ವಿಕವಾಗಿ ಎಲ್ಲರ ಮೆಚ್ಚುಗೆಗೂ ಪಾತ್ರವಾಗಿವೆ. ನಿಧಿಯ ಹಲವು ಕಾರ್ಯಕ್ರಮಗಳಿಗೆ ವಿಶ್ವಾದ್ಯಂತ ಎಲ್ಲ ರಾಷ್ಟ್ರಗಳ ಸ್ವಾಗತವಿದೆ.

1 ಇಂಧನಕ್ಕೆ ಬದಲಿ ಮೂಲಗಳನ್ನು ಶೋಧಿಸಲು ನಿಧಿಯ ನೆರವುಂಟು. ಬಯೋಗ್ಯಾಸಿನ ಉತ್ಪಾದನೆಯಿಂದ ಪೆಟ್ರೋಲಿಯಮ್ ಮೇಲಿನ ಅವಲಂಬನ ಕಡಮೆಯಾಗಿ ವಿದೇಶಿ ವಿನಿಮಯದ ಉಳಿಕೆಯಾಗುತ್ತದೆ.

2 ಸದಸ್ಯ ರಾಷ್ಟ್ರಗಳ ವಿದೇಶಿ ವಿನಿಮಯ ನಷ್ಟವನ್ನು ತಡೆಗಟ್ಟಲು ಆಮದಿನ ಬದಲು ದೇಶದಲ್ಲೇ ಉತ್ಪಾದನೆಯನ್ನು ಹೆಚ್ಚಿಸುವುದಕ್ಕೆ ನಿಧಿ ನೆರವಾಗುತ್ತದೆ.

3 ತೆರಿಗೆ ವ್ಯವಸ್ಥೆಯನ್ನು ಸರಳಗೊಳಿಸಬೇಕೆಂಬ ನಿಧಿಯ ಆಶಯವನ್ನು ಸದಸ್ಯ ರಾಷ್ಟ್ರಗಳು ಸ್ವಾಗತಿಸಿವೆ.

4 ಸರ್ಕಾರಿ ಆಡಳಿತ ಯಂತ್ರದ ಖರ್ಚನ್ನು ಕಡಮೆ ಮಾಡುವ ದಿಶೆಯಲ್ಲಿ ನಿಧಿಯ ಪಾತ್ರವೂ ಸಾಕಷ್ಟಿದೆ.

5 ಕೈಗಾರಿಕಾಭಿವೃದ್ಧಿಯನ್ನು ಸುಗಮಗೊಳಿಸಲು ಅನುವಾಗುವಂತೆ ಮೂಲಭೂತ ಸೌಕರ್ಯಗಳಾದ ರಸ್ತೆ, ವಿದ್ಯುತ್, ನೀರು ಮುಂತಾದವುಗಳ ಸಮರ್ಪಕ ವ್ಯವಸ್ಥೆ ಮಾಡಲು ಅಭಿವೃದ್ಧಿಶೀಲ ದೇಶಗಳಿಗೆ ನಿಧಿ ಸಹಾಯ ಮಾಡುವುದು.

6 ನಿಧಿ ಸಾಲ ನೀಡುವಾಗ, ಸಾಲ ಪಡೆಯುವ ದೇಶದ ಅನೇಕ ಅಂಕಿ ಅಂಶಗಳ ಸಂಗ್ರಹಣೆ ಅಧ್ಯಯನಗಳು ನಡೆಯುವುವಲ್ಲದೆ, ತಜ್ಞರು ಆ ದೇಶಗಳಿಗೆ ಭೇಟಿ ನೀಡಿ ವರದಿ ಒಪ್ಪಿಸುತ್ತಾರೆ, ಹಲವು ಸುತ್ತಿನ ಮಾತುಕತೆಗಳೂ ನಡೆಯುತ್ತವೆ. ಇದರಿಂದಲೂ ಕೆಲವು ಅನುಕೂಲಗಳಿವೆ.

ಅಂತರರಾಷ್ಟ್ರೀಯ ಹಣ ನಿಧಿಯನ್ನು 'ಪಟ್ಟಭದ್ರ ಹಿತಾಸಕ್ತಿಗಳ ಕೀಲುಗೊಂಬೆ', 'ಕಠಿಣ ಷರತ್ತುಗಳ ಸಾಲಿಗ', 'ಕೆಟ್ಟ ಬ್ಯಾಂಕರ್' ಮುಂತಾದ ಬಿರುದಾವಳಿಗಳಿಂದ ಕೀರ್ತಿಸಿದರೆ ಎಲ್ಲ ಮಾಡಿದಂತಾಗುವುದಿಲ್ಲ. ಅಂತರರಾಷ್ಟ್ರೀಯ ಹಣ ವ್ಯವಹಾರಗಳಲ್ಲಿ ಅಭಿವೃದ್ಧಿಯನ್ನೂ ಸಮತೋಲವನ್ನೂ ಸಾಧಿಸಲು ಇಂಥ ಸಂಸ್ಥೆಯ ಅವಶ್ಯಕತೆಯಿದೆ ಎಂಬುದನ್ನು ಮನಗಾಣಬೇಕು. ಹಾಗೇ ಇತಿ–ಮಿತಿಗಳಿದ್ದರೂ ಆ ಸಂಸ್ಥೆಯ ಸಾಧನೆಯನ್ನೂ ಅಂತರರಾಷ್ಟ್ರೀಯ ವ್ಯಾಪಾರ ಅಭಿವೃದ್ಧಿಯಲ್ಲಿ ಅದರ ಪಾತ್ರವನ್ನೂ ಕೀಳ್ಗಳೆಯದೆ ಸಂಸ್ಥೆ ಇನ್ನೂ ಅರ್ಥಪೂರ್ಣವಾಗಿ ಕಾರ್ಯವೆಸಗಲು ಸಹಕರಿಸಬೇಕು.

ಸದಸ್ಯ ರಾಷ್ಟ್ರಗಳ ಆರ್ಥಿಕ ಸಮಸ್ಯೆಗಳ ಬಗ್ಗೆ ಸಂಸ್ಥೆಯ ದೃಷ್ಟಿ ಹೆಚ್ಚು ಉದಾರವಾಗಿರಲಿ ಎಂಬುದು ಎಲ್ಲ ರಾಷ್ಟ್ರಗಳ ಆಶಯ. ಈ ಆಶಯ ಈಡೇರುವ ದಿನವನ್ನು ಅಸಹಾಯಕತೆಯಿಂದ ಎದುರು ನೋಡುವ ಬದಲು ಈ ವ್ಯವಸ್ಥೆಯಲ್ಲಿರುವ ದೋಷಗಳನ್ನು ಸರಿಪಡಿಸಲು ದೃಢವಾದ ಪ್ರಯತ್ನಗಳು ನಡೆಯಬೇಕು.

## ಮಗನ ಕೆಲಸ

"ಏನು ರಾಮಣ್ಣಾ? ಆರೋಗ್ಯವಾಗಿದ್ದೀಯ ತಾನೆ? ಮಕ್ಕಳೆಲ್ಲ ಏನ್ಮಾಡ್ತಾ ಇದಾರೆ ಈಗ?

"ಸಂದಾಗಿವ್ನಿ ಬುದ್ಧಿ. ದೊಡ್ಡ ಮಗ ಕೆಲಸ ಮಾಡ್ತಾ ಐನೆ".

"ಎಲ್ಲಿ?"

"ಅದೇ, ಬ್ಯಾಂಕ್‌ನಾಗೆ ಸಾಮಿ."

"ಪರವಾಗಿಲ್ಲಯ್ಯ, ಒಳ್ಳೇ ಕೆಲಸಾನೆ ಸಿಕ್ಕಿದೆ. ಕೈ ತುಂಬ ಸಂಬಳ ಬೇರೆ. ನಿಂಗೇನು ಯೋಚ್ನೆ ಇಲ್ಲ ಬಿಡು."

"ಸಂಬಳ ಏನೋ ಬರ್ತದೆ ಸಾಮಿ, ಆದರೆ ಆ ರಕ್ತ ಹೀರೋ ಕೆಲ್ಸ ಮಾತ್ರ ನಂಗ್ಯಾಕೋ ಹಿಡಿಸ್ಲಿಲ್ಲ ಸಾಮಿ."

"ಯಾರಯ್ಯ ಹೇಳಿದ್ದು ಬ್ಯಾಂಕಿನ ಕೆಲಸ ರಕ್ತ ಹೀರೋದು ಅಂತ? ಸಾಲಕ್ಕೆ ಬ್ಯಾಂಕ್‌ನಾಗೆ ಬಡ್ಡಿ ದರ ಜಾಸ್ತಿ ಇರತ್ತೆ ನಿಜ. ಆದ್ರೆ ನಿನ್ನ ಮಗ ಏನು ಮಾಡಕ್ಕೆ ಆಗತ್ತೆ? ಸರ್ಕಾರದ ಕಾನೂನು ಇದ್ದಂಗೆ ಬಡ್ಡಿ ಇರತ್ತೆ. ಬ್ಯಾಂಕ್‌ನವ್ರು ವಸೂಲಿ ಮಾಡಲೇಬೇಕಾಗತ್ತೆ."

"ಅವನ್ಯಾವ ಬಡ್ಡಿ ವಸೂಲ್ಮಾಡ್ತಾನೆ ಬುಡಿ ಸಾಮಿ! ಬರೀ ರಕ್ತ ಹೀರೋದೆ!

"ರಕ್ತ ಹೀರೋದು ಅಂದ್ರೆ ಏನಯ್ಯಾ? ಯಾವ ಬ್ಯಾಂಕ್‌ನಾಗೆ ಇರೋದು ನಿನ್ನ ಮಗ?

"ಅದೇ ಸಾಮಿ, ಬ್ಲಡ್ ಬ್ಯಾಂಕು."

**ಪು. ರಾ. ಮುರಳೀಧರ್**

# ವಿದೇಶಗಳಲ್ಲಿ ಬ್ಯಾಂಕಿಂಗ್ ವ್ಯವಸ್ಥೆ ಮತ್ತು ಹಣದ ಆಡಳಿತ-೧

## ಅಮೆರಿಕದಲ್ಲಿ

ಸಾ. ಅ. ಮಂಜುನಾಥ

### ಐತಿಹಾಸಿಕ ಹಿನ್ನೆಲೆ

ಅಮೆರಿಕದಲ್ಲಿ ಬ್ಯಾಂಕಿಂಗ್ ವ್ಯವಸ್ಥೆ 18ನೆಯ ಶತಮಾನದಲ್ಲಿ ಆರಂಭವಾಯಿತು. ಆಗ ವ್ಯಕ್ತಿಗಳು, ವರ್ತಕರು ಮತ್ತು ಸ್ಥಳೀಯ ಸರಕಾರಗಳು ಪರಸ್ಪರವಾಗಿ ಸಾಲವನ್ನು ಕೊಡುಕೊಳ್ಳುವ ವ್ಯವಹಾರವನ್ನು ಮಾಡುತ್ತಿದ್ದರು. 1781 ರಲ್ಲಿ ಅಮೆರಿಕದ ಮೊದಲ ಬ್ಯಾಂಕಾದ ಬ್ಯಾಂಕ್ ಆಫ್ ನಾರ್ತ್ ಅಮೆರಿಕ ಫಿಲಡೆಲ್ಫಿಯದಲ್ಲಿ ಸ್ಥಾಪಿತವಾಯಿತು. ಅಂದಿನ ಅಮೆರಿಕನ್ ಕ್ರಾಂತಿ ಯುದ್ಧಕ್ಕೆ ಹಣ ಒದಗಿಸುವುದು ಅದರ ಉದ್ದೇಶ. ಬ್ಯಾಂಕ್ ಆಫ್ ನ್ಯೂ ಯಾರ್ಕ್ ಮತ್ತು ಬ್ಯಾಂಕ್ ಆಫ್ ಮ್ಯಾಸಚೂಸೆಟ್ಸ್ ಸರಕಾರಿ ಸನ್ನದನ್ನು ಪಡೆದುವು. ಮರುವರ್ಷ ಅಮೆರಿಕದ ಕಾಂಗ್ರೆಸ್ ನೀಡಿದ 20ವರ್ಷಗಳ ಸನ್ನದಿನೊಂದಿಗೆ ಫಸ್ಟ್ ಬ್ಯಾಂಕ್ ಆಫ್ ದಿ ಯುನೈಟೆಡ್ ಸ್ಟೇಟ್ಸ್ ಸ್ಥಾಪಿತವಾಯಿತು. ಈ ಬ್ಯಾಂಕಿಗೆ ನೀಡಲಾಗಿದ್ದ ಸನ್ನದು 1811 ರಲ್ಲಿ ಮುಗಿದಾಗ ಕಾಂಗ್ರೆಸ್ ಅದನ್ನು ನವೀಕರಿಸಲಿಲ್ಲವಾಗಿ ಇದು ವಿಸರ್ಜಿತವಾಗಬೇಕಾಯಿತು. 1812ರ ಯುದ್ಧ ಮತ್ತು ಅನಂತರದ ಹಣದುಬ್ಬರದ ಸ್ಥಿತಿಗಳನ್ನು ಪರಿಗಣಿಸಿ 1816ರಲ್ಲಿ ಕಾಂಗ್ರೆಸ್ಸು ಸೆಕೆಂಡ್ ಬ್ಯಾಂಕ್ ಆಫ್ ಯುನೈಟೆಡ್ ಸ್ಟೇಟ್ಸ್ ಅನ್ನು ಸ್ಥಾಪಿಸಲು ಅನುಮತಿ ನೀಡಿತು. ಅನಂತರದ ಕಾಲದಲ್ಲಿ ಉಂಟಾದ ಅಂತರ್ಯುದ್ಧಕ್ಕೆ ಹಣ ಒದಗಿಸಲು ಹಾಗೂ ಬ್ಯಾಂಕಿಂಗ್ ಕ್ಷೇತ್ರದ ಅನಿಯಂತ್ರಿತ ಸ್ಥಿತಿಯನ್ನು ತಪ್ಪಿಸಲು ಕಾಂಗ್ರೆಸ್ 1863ರಲ್ಲಿ ರಾಷ್ಟ್ರೀಯ ಬ್ಯಾಂಕಿಂಗ್ ಅಧಿನಿಯಮವನ್ನು ಜಾರಿಗೆ ತಂದಿತು. ಇದರಿಂದಾಗಿ ಇಡೀ ದೇಶಕ್ಕೆ ಸಮಾನವಾದ ರಾಷ್ಟ್ರೀಯ ಹಣವನ್ನು ಚಲಾವಣೆಗೆ ತರಲು ಸಾಧ್ಯವಾಯಿತು. 1863 ಮತ್ತು 1907ರಲ್ಲಿ ಉಂಟಾದ ಕಳವಳಕಾರಿ ಆರ್ಥಿಕ ಪರಿಸ್ಥಿತಿಯನ್ನು ಗಮನಿಸಿದ ಕಾಂಗ್ರೆಸ್ 1913ರಲ್ಲಿ ಫೆಡರಲ್ ರಿಜರ್ವ್ ಅಧಿನಿಯಮವನ್ನು ಅಂಗೀಕರಿಸಿತು. ಈ ಅಧಿನಿಯಮದನ್ವಯವೇ ಅಮೆರಿಕದ ಇಂದಿನ ಬ್ಯಾಂಕಿಂಗ್ ವ್ಯವಸ್ಥೆ ನಿಂತಿದೆ.

### ಫೆಡರಲ್ ರಿಜರ್ವ್ ವ್ಯವಸ್ಥೆ

ಫೆಡರಲ್ ರಿಜರ್ವ್ ವ್ಯವಸ್ಥೆ ಅಮೆರಿಕದ ಇಂದಿನ ಬ್ಯಾಂಕಿಂಗ್ ವ್ಯವಸ್ಥೆ. ಇದು ಸಂಯುಕ್ತ ಸ್ವರೂಪದ ಸರಕಾರಿ ಅಧಿಕರಣಗಳಿಂದ ಕೂಡಿದ ವ್ಯವಸ್ಥೆ. ಇದರಲ್ಲಿ ಎರಡು ಸ್ತರಗಳಿವೆ. ಮೇಲು ಸ್ತರದಲ್ಲಿ ಇಡೀ ದೇಶದ ಆರ್ಥಿಕ ಆಡಳಿತದ ಮೇಲ್ವಿಚಾರಣೆಯನ್ನು ಗಮನಿಸುವ ಫೆಡರಲ್ ರಿಜರ್ವ್ ಬೋರ್ಡ್ ಎಂಬ ಮಂಡಳಿ ಇರುತ್ತದೆ. ಕೆಳ ಸ್ತರದಲ್ಲಿ ಸ್ವಾಯತ್ತತೆಯುಳ್ಳ 12 ಫೆಡರಲ್ ರಿಜರ್ವ್ ಬ್ಯಾಂಕ್‌ಗಳಿರುತ್ತವೆ. ಇವುಗಳಿಗೆ ಆರ್ಥಿಕ ನೀತಿ ನಿರೂಪಣೆಯ ಮಾರ್ಗದರ್ಶನ ನೀಡುವಷ್ಟರ ಮಟ್ಟಿಗೆ ಮಾತ್ರ ಫೆಡರಲ್ ರಿಜರ್ವ್ ಬೋರ್ಡಿನ ನಿಯಂತ್ರಣ ಈ ಬ್ಯಾಂಕುಗಳ ಮೇಲಿರುತ್ತದೆ. ಈ 12 ಫೆಡರಲ್ ಬ್ಯಾಂಕುಗಳ ರಿಜರ್ವ್ ಬಂಡವಾಳವನ್ನು ಈ ವ್ಯವಸ್ಥೆಯ ಸದಸ್ಯ ಸಂಸ್ಥೆಗಳಾದ ವಾಣಿಜ್ಯ ಬ್ಯಾಂಕುಗಳು ಹೊಂದಿರುತ್ತವೆ. ಈ ವಾಣಿಜ್ಯ ಬ್ಯಾಂಕುಗಳು ತಮ್ಮ ಷೇರುಗಳಿಗಾಗಿ ಸೇ. 6ರ ಲಾಭಾಂಶ ಪಡೆಯುತ್ತವೆ. ರಿಜರ್ವ್ ಬ್ಯಾಂಕ್‌ಗಳ ಉಳಿದ ಲಾಭ ಅಮೆರಿಕದ ರಾಜಕೋಶಕ್ಕೆ ಸೇರುತ್ತದೆ.

### ಮಂಡಳಿಯ ಆಡಳಿತ ವ್ಯವಸ್ಥೆ

ಫೆಡರಲ್ ರಿಜರ್ವ್ ಮಂಡಳಿಯ ಸದಸ್ಯರನ್ನು ಗವರ್ನರುಗಳೆನ್ನುತ್ತಾರೆ. ಇವರಲ್ಲಿ ಏಳು ಜನರನ್ನು ದೇಶದ ಅಧ್ಯಕ್ಷರು ನೇಮಿಸುತ್ತಾರೆ. ಈ ಏಳು ಜನರ ಅಧಿಕಾರಾವಧಿ 14 ವರ್ಷಗಳು. ಈ ಅವಧಿಯ ಅನಂತರ ಇವರು ಮರುನೇಮಕಗೊಳ್ಳುವಂತಿಲ್ಲ. ಮಂಡಳಿಯ ಸದಸ್ಯರಲ್ಲಿ ಒಬ್ಬರನ್ನು ಅಧ್ಯಕ್ಷರಾಗಿಯೂ ಇನ್ನೊಬ್ಬರನ್ನು ಉಪಾಧ್ಯಕ್ಷರಾಗಿಯೂ ದೇಶದ ಅಧ್ಯಕ್ಷರು ನಾಲ್ಕು ವರ್ಷಗಳ ಅವಧಿಗೆ ನೇಮಿಸುತ್ತಾರೆ. ಈ ಅವಧಿಯ ಅನಂತರ ಇವರು ಆ ಹುದ್ದೆಗಳಿಗೆ ಮರುನೇಮಕಗೊಳ್ಳಲು ಅರ್ಹರು. ಫೆಡರಲ್ ರಿಜರ್ವ್ ಮಂಡಳಿಗೆ ಸದಸ್ಯರನ್ನು ನೇಮಿಸುವಾಗ ಪ್ರಾದೇಶಿಕ ಸಮತೋಲವನ್ನು ಕಾಯ್ದುಕೊಳ್ಳುವ ಸಂಪ್ರದಾಯವಿದೆ.

### ಕರ್ತವ್ಯಗಳು ಮತ್ತು ಅಧಿಕಾರಗಳು

ಫೆಡರಲ್ ರಿಜರ್ವ್ ತನ್ನ ಕಾರ್ಯನೀತಿಗಳ ಬಗ್ಗೆ ವರ್ಷಕ್ಕೆರಡು ಬಾರಿ ದೇಶದ ಕಾಂಗ್ರೆಸ್ ಸಭೆಗೆ ವರದಿ ಸಲ್ಲಿಸಬೇಕು. ದೇಶದ ಅಧ್ಯಕ್ಷರಿಗಾಗಲಿ ಕಾರ್ಯಾಂಗಕ್ಕಾಗಲಿ ಈ ವರದಿಯನ್ನು ಅದು ಸಲ್ಲಿಸಬೇಕಾಗಿಲ್ಲ. ಫೆಡರಲ್ ರಿಜರ್ವ್ ಸರಕಾರದ ಎಲ್ಲ ನೀತಿ ನಿರೂಪಣ ಸಂಸ್ಥೆಗಳೊಡನೆಯೂ ನಿಕಟ ಸಂಪರ್ಕವನ್ನಿಟ್ಟುಕೊಂಡಿರುತ್ತದೆ. ಸರಕಾರದೊಡನೆ ನಡೆಸಬೇಕಾದ ಸಮಾಲೋಚನೆಗಳಲ್ಲಿ ರಿಜರ್ವ್ ಬೋರ್ಡ್ ಅನ್ನು ರಿಜರ್ವ್ ಬೋರ್ಡ್‌ನ ಅಧ್ಯಕ್ಷ ಪ್ರತಿನಿಧಿಸುತ್ತಾನೆ. ರಿಜರ್ವ್ ಬೋರ್ಡ್ ಅಧ್ಯಕ್ಷ ಹಾಗೂ ಸದಸ್ಯರು ಆಗಾಗ್ಗೆ ಕಾಂಗ್ರೆಸ್ ಸಭೆ ರಚಿಸಿದ ಸಮಿತಿಗಳ ಮುಂದೆ ಆರ್ಥಿಕ ನೀತಿಯ ಗುರಿ ಹಾಗೂ ಅದನ್ನು ಜಾರಿಗೆ ತರುವುದರ ವಿವರಣೆ ನೀಡುತ್ತಾರೆ. ವಾರ್ಷಿಕ ವರದಿಯನ್ನು ಪ್ರಕಟಿಸಲಾಗುತ್ತದೆ.

### ಪ್ರಾದೇಶಿಕ ರಿಜರ್ವ್ ಸಂಸ್ಥೆಗಳ ಆಡಳಿತ

ಫೆಡರಲ್ ರಿಜರ್ವ್ ವ್ಯವಸ್ಥೆಯಲ್ಲಿ ಹನ್ನೆರಡು ಫೆಡರಲ್ ರಿಜರ್ವ್ ಬ್ಯಾಂಕ್‌ಗಳಿರುತ್ತವೆಯೆಂದು ಮೇಲೆ ಹೇಳಿದೆಯಷ್ಟೆ. ಇವುಗಳ ಆಡಳಿತಕ್ಕಾಗಿ ಆಯಾ ಬ್ಯಾಂಕಿಗೆ ಒಂದೊಂದು ನಿರ್ದೇಶಕ ಮಂಡಳಿ ಇರುತ್ತದೆ. ಇವರಲ್ಲಿ 'ಎ', 'ಬಿ', 'ಸಿ' ಎಂಬ ತರಗತಿಗಳ ನಿರ್ದೇಶಕರಿರುತ್ತಾರೆ. 'ಎ' ತರಗತಿಯ ನಿರ್ದೇಶಕರು ಸದಸ್ಯ ಬ್ಯಾಂಕುಗಳನ್ನು ಪ್ರತಿನಿಧಿಸುತ್ತಾರೆ. 'ಬಿ' ತರಗತಿಯ ನಿರ್ದೇಶಕರು ಬ್ಯಾಂಕಿಂಗ್ ಅಲ್ಲದ ವೃತ್ತಿಗಳಲ್ಲಿ ನಿರತರಾದವರಾಗಿರುತ್ತಾರೆ. 'ಎ' ಮತ್ತು 'ಬಿ' ತರಗತಿಯ ನಿರ್ದೇಶಕರು ಸದಸ್ಯ ಬ್ಯಾಂಕುಗಳಿಂದ ಆರಿಸಲ್ಪಡುತ್ತಾರೆ. 'ಸಿ' ತರಗತಿಯ ನಿರ್ದೇಶಕರನ್ನು ಫೆಡರಲ್ ರಿಜರ್ವ್ ಬೋರ್ಡ್‌ನ ಸದಸ್ಯರು ನೇಮಿಸುತ್ತಾರೆ.

ಫೆಡರಲ್ ರಿಜರ್ವ್ ಬ್ಯಾಂಕುಗಳ ಒಟ್ಟಾರೆ ಆರ್ಥಿಕ ನೀತಿ ನಿರ್ಧಾರಣ ಕಾರ್ಯವನ್ನು ಫೆಡರಲ್ ಓಪನ್ ಮಾರ್ಕೆಟ್ ಸಮಿತಿ ಎಂಬ ಸಮಿತಿ ನಿರ್ವಹಿಸುತ್ತದೆ. ಈ ಸಮಿತಿಯಲ್ಲಿ ಫೆಡರಲ್ ರಿಜರ್ವ್ ಬೋರ್ಡಿನ ಸದಸ್ಯರು ಮತ್ತು ಫೆಡರಲ್ ರಿಜರ್ವ್ ಬ್ಯಾಂಕುಗಳ ಅಧ್ಯಕ್ಷರು ಇರುತ್ತಾರೆ. ಈ ಐದು ಜನರ ಪೈಕಿ ನಾಲ್ಕು ಜನರ ಅಧಿಕಾರಾವಧಿ ಒಂದು ವರ್ಷ ಮಾತ್ರವಿದ್ದು ಸರದಿಯ ಪ್ರಕಾರ ಎಲ್ಲ 12 ರಿಜರ್ವ್ ಬ್ಯಾಂಕುಗಳಿಗೂ ಪ್ರಾತಿನಿಧ್ಯ ದೊರೆಯುತ್ತದೆ. ಫೆಡರಲ್ ರಿಜರ್ವ್ ಬ್ಯಾಂಕ್ ಆಫ್ ನ್ಯೂಯಾರ್ಕಿನ ಅಧ್ಯಕ್ಷ ಮಾತ್ರ ಈ ಸಮಿತಿಯಲ್ಲಿ ಶಾಶ್ವತ ಸದಸ್ಯನಾಗಿರುತ್ತಾನೆ. ಅವನಿಗೆ ಒಂದು ವರ್ಷದ ಸರದಿ ಅವಧಿ ಬದಲಾವಣೆ ಅನ್ವಯವಾಗುವುದಿಲ್ಲ.

## ಕಾಳ್ಕೆ ತಪ್ಪಿತು

ಬ್ಯಾಂಕಿನ ಸಾಲದ ಖಾತೆಯಲ್ಲಿ ಕುಳಿತಿದ್ದ ಗುಮಾಸ್ತನೊಬ್ಬ ತನ್ನ ಮುಂದೆ ಸಾಲಕ್ಕಾಗಿ ನಿಂತಿದ್ದ ರೈತನನ್ನು ವಿಚಾರಿಸುತ್ತಿದ್ದ.

"ನಿನ್ನ ಹೆಸರೇನಯ್ಯ?"

"ಸಿದ್ದಯ್ಯ ಸ್ವಾಮಿ."

"ನಿನ್ನ ತಂದೆ ಹೆಸರು?"

"ದೊಡ್ಡ ಸಿದ್ದಯ್ಯ ಸ್ವಾಮಿ."

"ಹೋಗಲಿ ನಿನ್ನ ಮಗನ ಹೆಸರು?"

"ಸಿದ್ದಪ್ಪ ಅಂತ ಮಡಗಿವ್ನಿ ಬುದ್ಧಿ."

"ಏನಯ್ಯ ನಿನ್ನ ವಂಶ ಎಲ್ಲ ಸಿದ್ದರೇ ಇದಾರೆ?"

ರೈತ ಸುಮ್ಮನೆ ನಕ್ಕ, ಅಷ್ಟೇ.

"ಸರಿ, ನಿನಗೆ ಜಂಟಿ ಸಾಲಗಾರರು ಯಾರಾಗ್ತಾರೆ ಕರಿ ಅವರ್ನ."

"ಅದೇ ಸಾಮಿ, ನಮ್ಮ ಪಕ್ಕದ ಅಟ್ಟಿ ಸಿದ್ದಣ್ಣ."

ಆ 'ಸಿದ್ದ'ನನ್ನೂ ಕೇಳಲಾಯ್ತು.

"ನಿನ್ನ ತಂದೆಯ ಹೆಸರು ಏನಯ್ಯ?"

"ರಾಮನಹಳ್ಳಿ ಸಿದ್ದಯ್ಯ ಸ್ವಾಮಿ."

ಇನ್ನು ಆ ಗುಮಾಸ್ತನಿಗೆ ತಡೆಯಲಾಗಲಿಲ್ಲ. ಸಾಲಕ್ಕಾಗಿ ಬಂದಿದ್ದ ಸಿದ್ದಯ್ಯನನ್ನು ಕರೆದು ಕೇಳಿದ.

"ಏನಯ್ಯ ನಿಮ್ಮೂರಲ್ಲಿ ಬರಗಾಲ ಅಂತ ಕೇಳಿದೆ, ನಿಜವಾ?"

"ಹೌದು ಸಾಮಿ ಮಳೆ ಇಲ್ದೆ ದನಗಳಿಗೆ ಮೇವಿಲ್ದೆ ಬರಗಾಲ ಬಂದೈತೆ."

"ಅದಲ್ಲಯ್ಯ ನಾನು ಕೇಳಿದ್ದು. ಆ ಬರಗಾಲ ಎಲ್ಲ ಕಡೇನೂ ಇರತ್ತೆ. ಏನು ನಿಮ್ಮೂರಲ್ಲಿ ಹೆಸರುಗಳಿಗೂ ಬರಗಾಲಾನಾ?"

ಪು. ರಾ. ಮುರಳೀಧರ್

# ಬ್ಯಾಂಕುಗಳಲ್ಲಿ ಜನನಿರ್ವಹಣೆ

ಕೆ. ಕೆ. ಅಮ್ಮಣ್ಣಾಯ

## ಈಗಿನ ದಿನಗಳಲ್ಲಿ ಜನನಿರ್ವಹಣೆಯೂ ಒಂದು ಸೇವೆ

ಬ್ಯಾಂಕಿಂಗ್ ಉದ್ಯಮದಲ್ಲಿ ಈ ಹಿಂದೆ ಜನನಿರ್ವಹಣೆ ಕೇವಲ ನೇಮಕಾತಿ, ತರಬೇತಿ, ವರ್ಗಾವಣೆ ಮತ್ತು ವೇತನ ಬಟವಾಡೆಗಳಂಥ ಸಾಂಪ್ರದಾಯಿಕ ಕಾರ್ಯಕ್ರಮಗಳಿಗೆ ಸೀಮಿತವಾಗಿತ್ತು. ಆದರೆ ಈಚೆಗೆ ಬ್ಯಾಂಕಿಂಗ್ ಉದ್ಯಮದ ನೌಕರ ನಿರ್ವಹಣಾ ರಂಗದಲ್ಲಿ ಮಹತ್ತರ ಬದಲಾವಣೆ ಗಳಾಗಿವೆ. ಜನ ನಿರ್ವಹಣೆ ಹೊಸ ಆಯಾಮಗಳನ್ನು ಕಂಡಿದೆ. ಇಂದು ಜನ ನಿರ್ವಹಣೆಯೆಂದರೆ ಬರೀ ನಿಯಂತ್ರಣ ಮತ್ತು ಮೇಲ್ವಿಚಾರಣೆಯಷ್ಟೆ ಅಲ್ಲ. ಇಂದು ಜನ ನಿರ್ವಹಣೆಗೆ ಅನೇಕ ಹೊಸ ಅಂಶಗಳು ಸೇರಿವೆ. ಅಂಥ ಹೊಸ ಅಂಶಗಳಲ್ಲಿ ಮುಖ್ಯವಾದವುಗಳೆಂದರೆ ನೌಕರರ ವೈಯಕ್ತಿಕ ಅಭಿವೃದ್ಧಿಗೆ ಪ್ರಾಧಾನ್ಯ, ಮುಕ್ತ ನಿರ್ವಹಣೆ (ಓಪನ್ ಮ್ಯಾನೇಜ್‌ಮೆಂಟ್), ಸುದ್ದಿಗಳನ್ನು ಮತ್ತು ಅಂಕಿ ಅಂಶ ಗಳನ್ನು ಎಲ್ಲರಿಗೂ ತಲುಪುವಂತೆ ಮಾಡುವುದು ಮತ್ತು ಅವರ ಉಪಯೋಗಕ್ಕೆ ದೊರಕಿಸುವುದು, ನೌಕರರ ಸಲಹೆ ಸೂಚನೆಗಳನ್ನು ಪಡೆದುಕೊಂಡು ಸಂಸ್ಥೆಯ ಒಳಿತಿ ಗಾಗಿ ಉಪಯೋಗಿಸಿಕೊಳ್ಳುವುದು, ನೌಕರರ ಕೆಲಸ ಕಾಣಿಕೆಗಳನ್ನು ಗುರುತಿಸಿ ಅವರಿಗೆ ಉತ್ತೇಜನ ನೀಡುವುದು, ನೌಕರರನ್ನು ಕೈಕೆಳಗಿನವರೆಂದು ತಿಳಿಯದೆ ಸಹೋದ್ಯೋಗಿ ಗಳೆಂದು ಪರಿಗಣಿಸುವುದು, ಪ್ರತಿ ಅಧಿಕಾರಿಯೂ ಒಬ್ಬ ನಾಯಕನಂತೆ ವರ್ತಿಸುವುದು ಮತ್ತು ನೌಕರರು ತಮ್ಮ ಸೇವೆ ಸಾಧನೆಗಳಿಂದ ಸ್ಫೂರ್ತಿ ಪಡೆದುಕೊಳ್ಳುವಂತೆ ಮಾಡು ವುದು—ಇವನ್ನು ಒಟ್ಟಾಗಿ ಜನ ನಿರ್ವಹಣಾ ರಂಗದ ಹೊಸ ಆಯಾಮಗಳೆಂದು ಕರೆಯಬಹುದು. ನೌಕರರನ್ನು ಬೈದು ಹೆದರಿಸಿ ಕೆಲಸ ಮಾಡಿಸಿಕೊಳ್ಳುವ ಕಾಲ ಹೋಯಿತು. ಇಂದು ಪ್ರತಿ ಅಧಿಕಾರಿಯೂ ತನ್ನನ್ನು ಅಧಿಕಾರಿಯೆಂದು ಪರಿಗಣಿಸಿಕೊಳ್ಳದೆ ಬರೇ ಸಹೋದ್ಯೋಗಿಗಳ ಗುಂಪೊಂದಕ್ಕೆ ನಾಯಕನೆಂದು ಪರಿಗಣಿಸಿಕೊಳ್ಳಬೇಕು. ಬ್ಯಾಂಕಿಂಗ್ ಉದ್ಯ ಮದಲ್ಲಿ ಎಲ್ಲ ನೌಕರರಿಗೂ ಇಂದು ಒಂದೇ ರೀತಿಯ ಸೇವಾ ನಿಯಮಗಳಿವೆ. ಕಾರಕೂನರಿಗೆ ಮತ್ತು ಜವಾನರಿಗೆ ದ್ವಿಪಕ್ಷೀಯ ವ್ಯವಸ್ಥೆ (ಬೈಪಾರ್ಟಿ ಸೆಟ್ಲ್‌ಮೆಂಟ್) ಇದ್ದರೆ, ಅಧಿಕಾರಿಗಳಿಗೆ ಪಿಳ್ಳೈ ಸಮಿತಿ ಸೇವಾ ನಿಯಮ ಗಳಿವೆ. ಆದುದರಿಂದ ಸೇವಾ ನಿಯಮಗಳು ಎಲ್ಲ ಬ್ಯಾಂಕುಗಳಲ್ಲೂ ಒಂದೇ ರೀತಿ ಇವೆ. ಹಿಂದೆ ನಗದು ಉತ್ತೇಜಕಗಳ ಮೂಲಕ ನೌಕರರಿಗೆ ಪ್ರೋತ್ಸಾಹ ನೀಡಲು ಸಾಧ್ಯವಿತ್ತು. ಇಂದು ಅದು ಸಾಧ್ಯವಿಲ್ಲ. ಈಗಿನ ದಿನಗಳಲ್ಲಿ ಪದವೀಧರ ಹುಡುಗ ಹುಡುಗಿಯರು ಅನೇಕಾ ನೇಕ ಆಶೆ ಆಕಾಂಕ್ಷೆಗಳೊಂದಿಗೆ ಬ್ಯಾಂಕ್ ಸೇವೆಗೆ ಸೇರುತ್ತಾರೆ. ಅವರು ಹೊಸದಾಗಿ ಸೇರಿದ ಕೂಡಲೇ ಯಾವ ರೀತಿಯ ಪಂಥಾಹ್ವಾನ ಸ್ವೀಕರಿಸಲೂ ತಯಾರಿರುತ್ತಾರೆ. ಅವರು ತಮ್ಮ ಶಕ್ತಿ-ಕೌಶಲಗಳನ್ನು ಪ್ರದರ್ಶಿಸಲು ಅವಕಾಶಗಳನ್ನು ಅರಸುತ್ತಿರುತ್ತಾರೆ. ಆದುದರಿಂದ ಹೊಸದಾಗಿ ಸೇರಿದ ಕೂಡಲೇ ನೌಕರರಿಗೆ ಯುಕ್ತವಾದ ಅವಕಾಶಗಳನ್ನೂ ಪಂಥಾಹ್ವಾನಗಳನ್ನೂ ಶಾಶ್ವತವಾಗಿ ಸ್ವಯಂ ಪ್ರೇರಿತ ವ್ಯಕ್ತಿ ಗಳಾಗಿ (ಸೆಲ್ಫ್ ಮೋಟಿವೇಟೆಡ್) ಮಾಡಲು ಸಾಧ್ಯವಿದೆ. ಸಂಬಳದಲ್ಲಿ ಹೆಚ್ಚಳ ಯಾವುದೇ ವ್ಯಕ್ತಿಗೆ ಶಾಶ್ವತವಾಗಿ ಉತ್ತೇಜನ ಒದಗಿಸುವಂತಿಲ್ಲ. ಅವಕಾಶ ಮತ್ತು ಸವಾಲುಗಳು ಮಾತ್ರ ಈ ದಿಸೆಯಲ್ಲಿ ಪರಿಣಾಮಕಾರಿಯಾಗಬಲ್ಲವು.

ಜನನಿರ್ವಹಣಾ ವಿಭಾಗದ ಮುಂದಿರುವ ದೊಡ್ಡ ಸವಾಲೆಂದರೆ, ನೌಕರರು ತಮ್ಮ ಕಾರ್ಯಸಾಧನೆಗಳಿಂದ ಸ್ಫೂರ್ತಿ ಮತ್ತು ಉತ್ತೇಜನ ಪಡೆದುಕೊಳ್ಳುವಂತೆ ಮಾಡುವುದು. ಮೇಲೆ ಹೇಳಿದ ಹೊಸ ಆಯಾಮಗಳನ್ನು ಸರಿಯಾಗಿ ಲಕ್ಷ್ಯ ನೀಡಿ ನಿರ್ವಹಿಸುವುದರಿಂದ ಈ ಸವಾಲನ್ನು ಎದುರಿಸಲು ಮತ್ತು ಯಶಸ್ಸು ಗಳಿಸಲು ಸಾಧ್ಯ.

### ವೈಯಕ್ತಿಕ ಅಭಿವೃದ್ಧಿ

ಪ್ರತಿ ನೌಕರನೂ ತನ್ನ ವೈಯಕ್ತಿಕ ಅಭಿವೃದ್ಧಿಯಾಗ ಬೇಕೆಂದೂ ತಾನು ಎಲ್ಲರಂತೆ ಮೇಲೆ ಬರಲು ಅವಕಾಶ ಗಳಿರಬೇಕೆಂದೂ ಬಯಸುತ್ತಾನೆ. ಆದುದರಿಂದ ಪ್ರಗತಿಗೆ ಅವಕಾಶಗಳನ್ನು ಒದಗಿಸುವುದು ಜನನಿರ್ವಹಣಾ ವಿಭಾಗದ ಜವಾಬ್ದಾರಿಯಾಗಿದೆ. ನೌಕರರಿಗೆ ಹೊಸ ಹೊಸ ವಿಚಾರ

ಗಳನ್ನು ತಿಳಿದುಕೊಳ್ಳಲು ಸಂದರ್ಭಗಳನ್ನು ಒದಗಿಸುವುದರ ಮೂಲಕ ಅವರಿಗೆ ವಿಪುಲ ಅವಕಾಶಗಳನ್ನು ಕೊಡುವುದರ ಮೂಲಕ ಮತ್ತು ಅವರನ್ನು ಸವಾಲುಗಳಿಗೆ ಒಡ್ಡುವುದರ ಮೂಲಕ ಅವರ ಪ್ರಗತಿಯನ್ನು ಸಾಧಿಸಲು ಸಾಧ್ಯ. ಸಂಸ್ಥೆ ಮಾತ್ರವೇ ಬೆಳೆದರೆ ಸಾಲದು; ಅದರಲ್ಲಿ ಕೆಲಸ ಮಾಡುತ್ತಿರುವ ಜನರೂ ಬೆಳೆಯಬೇಕು. ಇದಕ್ಕಾಗಿ ಬ್ಯಾಂಕುಗಳ ಯೋಜನೆಗಳಲ್ಲಿ ಜೊತೆಯಾಗಿ ಬೆಳೆಯುವ ತತ್ತ್ವದ ಅನುಷ್ಠಾನವಾಗಬೇಕು. ಎಲ್ಲ ನೌಕರರಿಗೂ ಬ್ಯಾಂಕಿನ ವಿವಿಧ ಯೋಜನೆಗಳಲ್ಲಿ ಸಹಭಾಗಿತ್ವವಿರುವಂತೆ ನೋಡಬೇಕು.

### ಸಹಭಾಗಿತ್ವ

ಪ್ರತಿ ವಾಣಿಜ್ಯ ಬ್ಯಾಂಕಿಗೂ ಒಂದು ವಾರ್ಷಿಕ ಕಾರ್ಯಾಚರಣೆಯ ಯೋಜನೆ (ಪರ್ಫಾರ್ಮೆನ್ಸ್ ಬಜೆಟ್) ಇರುತ್ತದೆ. ಬ್ಯಾಂಕಿನ ಸರ್ವಾಂಗೀಣ ಪ್ರಗತಿ ಈ ಯೋಜನೆಯ ಉದ್ದೇಶ. ಈ ಯೋಜನೆಯಲ್ಲಿ ನಾವು ಆಧುನಿಕ ಜನ ನಿರ್ವಹಣೆಯ (ಪೀಪ್ಲ್ ಮ್ಯಾನೇಜ್‌ಮೆಂಟ್) ತತ್ತ್ವವಾದ ಜೊತೆಯಾಗಿ ಬೆಳೆಯುವ ತತ್ತ್ವ ಅಥವಾ ಒಟ್ಟಿಗೆ ಕೂಡಿ ಬೆಳೆಯುವ (ಗ್ರೋಯಿಂಗ್ ಟುಗೆದರ್) ನೀತಿಯನ್ನು ಕಾಣುತ್ತೇವೆ. ಅಂದರೆ ಇಂಥ ಕಾರ್ಯಾಚರಣೆಯ ಯೋಜನೆಯಿಂದ ಒಂದು ವಾಣಿಜ್ಯ ಬ್ಯಾಂಕು ತನ್ನ ಸರ್ವತೋಮುಖ ಪ್ರಗತಿ ಸಾಧಿಸಿಕೊಂಡು ದೇಶದ ಪ್ರಗತಿಗೆ ಸಾಲ ನೀಡಿಕೆಯಿಂದ ಮತ್ತು ಸಾಮಾಜಿಕ ಜವಾಬ್ದಾರಿಗಳ ಯಶಸ್ವಿ ನಿರ್ವಹಣೆಗೆ ಯತ್ನಿಸುವುದರ ಜೊತೆಗೆ ತನ್ನ ಎಲ್ಲ ನೌಕರರ ವೈಯುಕ್ತಿಕ ಉನ್ನತಿಗೂ ನೆರವಾಗುತ್ತದೆ. ಆದುದರಿಂದ ಬ್ಯಾಂಕುಗಳ ಕಾರ್ಯಾಚರಣೆಯ ಯೋಜನೆಗಳು ಈ ತ್ರಿವಿಧ ಉದ್ದೇಶಗಳನ್ನು ಏಕಕಾಲದಲ್ಲಿ ಸಾಧಿಸಲು ಇರುವ ಒಂದು ಕೌಶಲ ಎನ್ನಲಡ್ಡಿಯಿಲ್ಲ. ಸಾವಿರಾರು ಜನ ನೌಕರರಿರುವ ಪ್ರತಿ ಸಂಸ್ಥೆಯಲ್ಲೂ ಜನನಿರ್ವಹಣೆ ಬಹಳ ಹೆಚ್ಚಿನ ಪ್ರಾಧಾನ್ಯ ಪಡೆಯಬೇಕಾದ ಅಂಶ. ಸೇವಾ ಸಂಸ್ಥೆಗಳಾದ ಬ್ಯಾಂಕುಗಳಲ್ಲಂತೂ ಜನ ನಿರ್ವಹಣೆಯ ಪ್ರಾಧಾನ್ಯವನ್ನು ಎಷ್ಟು ಒತ್ತಿ ಹೇಳಿದರೂ ಸಾಲದು. "ಜನರೇ ಸಂಸ್ಥೆ" ಎಂದು ನಿರ್ವಹಣ ಶಾಸ್ತ್ರಜ್ಞರು ಹೇಳಿರುತ್ತಾರೆ. ಯಾವುದೇ ಸಂಸ್ಥೆಗೆ ಅದರಲ್ಲಿಯ ಜನರನ್ನು ಬಿಟ್ಟು ಒಂದು ನಿರ್ದಿಷ್ಟ ರೂಪ, ಗುಣ, ಸಂಸ್ಥಾ ಸಂಸ್ಕೃತಿ ಇರುವುದಿಲ್ಲ. ಸಂಸ್ಥೆಯಲ್ಲಿ ಕೆಲಸ ಮಾಡುವ ಜನರೇ ಅದಕ್ಕೆ ಒಂದು ನಿರ್ದಿಷ್ಟ ರೂಪ ಗುಣ ಒದಗಿಸುತ್ತಾರೆ. ಸೇವಾ ಸಂಸ್ಥೆಗಳಾದ ಬ್ಯಾಂಕುಗಳ ಯಶಸ್ಸು ಗ್ರಾಹಕ ಸೇವೆಯನ್ನು ಅವಲಂಬಿಸಿದೆ. ನೌಕರರು ಬ್ಯಾಂಕಿನ ಕೆಲಸ ಕಾರ್ಯಗಳಲ್ಲಿ ಸೇವೆ ನೀಡುವಲ್ಲಿ ಎಷ್ಟರ ಮಟ್ಟಿಗೆ ಪಾತ್ರ ವಹಿಸುತ್ತಾರೆಂಬುದರ ಮೇಲೆ ಬ್ಯಾಂಕಿನ ಯಶಸ್ಸು ಹೊಂದಿಕೊಂಡಿದೆ. ಬ್ಯಾಂಕಿನ ನೌಕರರು ಬ್ಯಾಂಕಿಗೆ ನಿರ್ದಿಷ್ಟ ರೂಪವನ್ನು ಒದಗಿಸುತ್ತಾರೆಂದು ಹೇಳಿದರೆ ತಪ್ಪಿಲ್ಲ. ಬ್ಯಾಂಕಿನ ಜನಪ್ರಿಯತೆ ಕೂಡ ನೌಕರರ ದಕ್ಷತೆ, ಸೇವಾ ಮನೋಭಾವ, ಸಾರ್ವಜನಿಕ ಸಂಬಂಧಗಳನ್ನು ಹೊಂದಿಕೊಂಡಿರುತ್ತದೆ.

### ತ್ರಿವಿಧ ಉದ್ದೇಶ

ಮೇಲೆ ಹೇಳಿದಂತೆ ಪ್ರತಿ ಬ್ಯಾಂಕಿನ ಕಾರ್ಯಾಚರಣೆಯ ಯೋಜನೆಗೆ ಮೂರು ಮುಖ್ಯ ಉದ್ದೇಶಗಳಿವೆ. ಅವುಗಳೆಂದರೆ

1 ಬ್ಯಾಂಕಿನ ಸರ್ವತೋಮುಖ ಹಾಗೂ ಕ್ಷಿಪ್ರ ಪ್ರಗತಿ. ಇಂಥ ಪ್ರಗತಿ ಆರೋಗ್ಯಯುತವಾಗಿಯೂ ಇರಬೇಕು.

2 ಸಾಮಾಜಿಕ ಜವಾಬ್ದಾರಿಗಳ ಯಶಸ್ವಿ ನಿರ್ವಹಣೆ. ದೇಶದ ಆರ್ಥಿಕ ಪ್ರಗತಿ ಯೋಜನೆಗಳಲ್ಲಿ ಸಾಲ ವಿತರಣೆಯ ಮೂಲಕ ಹಾಗೂ ಇತರ ರೀತಿಯಲ್ಲಿ ಭಾಗವಹಿಸಿ ಜನರ ಆಶೋತ್ತರಗಳನ್ನು ಈಡೇರಿಸುವುದು.

3 ಬ್ಯಾಂಕಿನ ಎಲ್ಲ ನೌಕರರಿಗೂ ಅಗತ್ಯವಾದ ಅವಕಾಶಗಳನ್ನು ಒದಗಿಸಿ, ಅವರಿಗೆ ಕೆಲಸದಲ್ಲಿ ಸವಾಲನ್ನು ನಿರ್ಮಿಸಿ ಅವರ ವೈಯಕ್ತಿಕ ಪ್ರಗತಿಯನ್ನು ಸಾಧಿಸುವುದು ಹಾಗೂ ಅವರಿಗೆ ಬಡ್ತಿ ಅವಕಾಶಗಳನ್ನು ಹೆಚ್ಚಿಸುವುದು.

ಬ್ಯಾಂಕುಗಳು ತಮ್ಮ ಸರ್ವತೋಮುಖ ಪ್ರಗತಿಯನ್ನು ಸಾಧಿಸಿಕೊಳ್ಳಬೇಕು. ಠೇವಣಿ ಶೇಖರಣೆ, ಸಾಲವಿತರಣೆ, ಶಾಖಾ ವಿಸ್ತರಣೆ, ಲಾಭಾಂಶದ ಹೆಚ್ಚಳದ ವಿನಿಯೋಜನೆ (ಇನ್‌ವೆಸ್ಟ್‌ಮೆಂಟ್ಸ್), ಅಂತರರಾಷ್ಟ್ರೀಯ ಬ್ಯಾಂಕಿಂಗ್ ಈ ಎಲ್ಲ ವಿಷಯಗಳಿಗೂ ಏಕಕಾಲದಲ್ಲಿ ಲಕ್ಷ್ಯ ನೀಡಿ ಸರ್ವತೋಮುಖ ಪ್ರಗತಿ ಸಾಧಿಸಬೇಕು. ಬ್ಯಾಂಕುಗಳು ಸರಕಾರಿ ವಲಯದಲ್ಲಿದ್ದರೂ ಲಾಭ ಸಂಪಾದಿಸುವ ಸಂಸ್ಥೆಗಳಾಗಿಯೇ ಉಳಿಯಬೇಕು. ಏಕೆಂದರೆ ಅವು ವಾಣಿಜ್ಯ ಸಂಸ್ಥೆಗಳು. ಅವುಗಳ ಕಾರ್ಯದಕ್ಷತೆಯನ್ನು (ಆಪರೇಷನಲ್ ಎಫಿಸಿಯೆನ್ಸಿ) ಲಾಭಾಂಶದ ಮಾನದಂಡದಿಂದ ಸರಕಾರ ಅಳೆಯುವುದು. ಆದುದರಿಂದ ಈ ಎಲ್ಲ ರಂಗಗಳಲ್ಲಿ ಪ್ರಗತಿಯಾಗಬೇಕಾದರೆ ಕಾರ್ಯಾಚರಣೆಯ ಯೋಜನೆ ಅತ್ಯಗತ್ಯ.

ಸಮಾಜಿಕ ಜವಾಬ್ದಾರಿಗಳ ನಿರ್ವಹಣೆ, ಮಾರ್ಗದರ್ಶಿ ಬ್ಯಾಂಕ್ ಯೋಜನೆಯ ಅನುಷ್ಠಾನಕ್ಕೂ ದೇಶದ ಆರ್ಥಿಕ ಪ್ರಗತಿ ಯೋಜನೆಗಳ ಅನುಷ್ಠಾನಕ್ಕೂ ನೆರವು ಇತ್ಯಾದಿಗಳಿಗೂ ಒಂದು ಯೋಜಿತ ಕಾರ್ಯಕ್ರಮ ಬೇಕು. ಇದು ಬ್ಯಾಂಕುಗಳ ಕಾರ್ಯಾಚರಣೆಯ ಯೋಜನೆಗಳಿಂದ ಸಾಧ್ಯ.

ವಾಣಿಜ್ಯ ಬ್ಯಾಂಕುಗಳು ತಮ್ಮ ಸಾಂಸ್ಥಿಕ ಪ್ರಗತಿ ಸಾಧಿಸಿಕೊಂಡರೆ ಸಾಲದು. ಜೊತೆಯಾಗಿ ಬ್ಯಾಂಕುಗಳಲ್ಲಿ ದುಡಿಯುತ್ತಿರುವ ಜನರೂ ವೈಯಕ್ತಿಕವಾಗಿ ಬೆಳೆಯಬೇಕು. ತಮ್ಮ ವೈಯಕ್ತಿಕ ಉನ್ನತಿ ಸಾಧಿಸಿಕೊಳ್ಳಬೇಕು. ಅವರಿಗೆ ಬಡ್ತಿ ಅವಕಾಶಗಳೂ ಹೆಚ್ಚಬೇಕು. ಅವರ ವ್ಯಕ್ತಿತ್ವದ ಬೆಳವಣಿಗೆಯಾಗಬೇಕು. ಅವರಲ್ಲಿ ನಾಯಕತ್ವದ ಗುಣಗಳು

ಹೆಚ್ಚಬೇಕು. ಇವೆಲ್ಲ ಅತಿ ಮುಖ್ಯ. ಏಕೆಂದರೆ ಈ ವೈಯಕ್ತಿಕ ಉದ್ದೇಶಗಳನ್ನು ಸಾಧಿಸಿಕೊಂಡ ಜನರು ಉದ್ಯೋಗ ತೃಪ್ತಿಯುಳ್ಳವರಾಗಿದ್ದು ಸಾಂಸ್ಥಿಕ ಪ್ರಗತಿಗೆ ಕಾಣಿಕೆ ನೀಡಲು ಶಕ್ತರಿರುತ್ತಾರೆ. ಮೇಲೆ ಹೇಳಿದ ಪ್ರಥಮ ಮತ್ತು ದ್ವಿತೀಯ ಉದ್ದೇಶಗಳ ಸಾಧನೆಯ ಮೂಲಕ ತೃತೀಯ ಉದ್ದೇಶವನ್ನು ಸಾಧಿಸಬಹುದು. ಒಂದು ಬ್ಯಾಂಕು ಬೆಳೆದರೆ, ಅದರ ಶಾಖೆಗಳ ಹೆಚ್ಚಳವಾದರೆ ಬಡ್ತಿ ತನ್ನಷ್ಟಕ್ಕೆ ಹೆಚ್ಚುತ್ತದೆ. ಹೀಗೆ ಈ ತ್ರಿವಿಧ ಉದ್ದೇಶಗಳ ಸಾಧನೆಯನ್ನು ಕಾರ್ಯ ಯೋಜನೆಗಳ ಮೂಲಕ ಬ್ಯಾಂಕುಗಳು ಮಾಡಿಕೊಳ್ಳಬಹುದು.

### ಅಪೇಕ್ಷಿತ ಸವಾಲು

ಮೊದಲು ಹೇಳಿದ ತ್ರಿವಿಧ ಉದ್ದೇಶಗಳಲ್ಲಿ ಮೂರನೆಯ ಉದ್ದೇಶದ ಸಾಧನೆಯಾಗಬೇಕಾದರೆ, ಎಂದರೆ ನೌಕರರ ವೈಯಕ್ತಿಕ ಉನ್ನತಿಯಾಬೇಕಾದರೆ, ಅವರಿಗೆ ಕೆಲಸದಲ್ಲಿ ಒಂದು ರೀತಿಯ ಸವಾಲು ಇರಬೇಕು. ದಿನನಿತ್ಯದ ಕೌಂಟರ್ ಕೆಲಸದಲ್ಲಿ ಅವರಿಗೆ ಅಪೇಕ್ಷಿತ ಸವಾಲು ದೊರೆಯುವುದಿಲ್ಲ. ಅದರಿಂದ ಅವರು ಬರೀ ದಿನಚರಿಯನ್ನು ಅನುಸರಿಸುತ್ತ ಇರಬೇಕಾಗುತ್ತದೆ. ಅವರ ಉತ್ಸಾಹ ಕ್ರಮೇಣ ಕುಗ್ಗಿ ಬೇಸರಗೊಳ್ಳಬಹುದು. ಅಂಥ ನೌಕರರು ಆಶಾಭಂಗಕ್ಕೆ ಒಳಗಾಗಬಹುದು. ಆದುದರಿಂದ ಅವರಿಗೆ ಉದ್ಯೋಗದಲ್ಲಿ ಸವಾಲು ಸಿಗುವಂತೆ ಮಾಡಬೇಕು. ಇದು ಕಾರ್ಯಾಚರಣೆಯ ಯೋಜನೆಯಿಂದ ಸಾಧ್ಯ. ವಾರ್ಷಿಕ ಕಾರ್ಯಾಚರಣೆಯ ಯೋಜನೆಯಲ್ಲಿ ಭಾಗವಹಿಸಲು ಪ್ರತಿ ನೌಕರನಿಗೂ ಅವಕಾಶ ಇರಬೇಕು. ಇದರಿಂದ ಅವನಿಗೆ ಯೋಜನಾ ತಂತ್ರಗಳ ಕುರಿತ ತಿಳುವಳಿಕೆ ಬರುವುದು. ಯೋಜನೆಗಳ ಅನುಷ್ಠಾನದಲ್ಲೂ ಭಾಗವಹಿಸಲು ನೌಕರನಿಗೆ ಅವಕಾಶಗಳು ಬೇಕು. ಇದರಿಂದ ಅವರನ್ನು ಯೋಜನೆಯ ರಚನೆ ಹಾಗೂ ಅನುಷ್ಠಾನದಲ್ಲಿ ಸವಾಲುಗಳಿಗೆ ಒಡ್ಡಿದಂತಾಗುತ್ತದೆ. ಇದರಿಂದ ಅವರ ವ್ಯಕ್ತಿತ್ವದ ವಿಕಾಸವಾಗುತ್ತದೆ. ಇಂಥ ವ್ಯಕ್ತಿತ್ವವಿಕಾಸವನ್ನು ಸಾಧಿಸಿಕೊಂಡವರು ಬಡ್ತಿ ಅವಕಾಶಗಳನ್ನು ಉಪಯೋಗಿಸಿಕೊಂಡು ನೌಕರಿಯಲ್ಲಿ ಮೇಲೆ ಬರಲು ಸಾಧ್ಯವಿದೆ.

### ವಿಕಾಸಕ್ಕಾಗಿ ಸಹಭಾಗಿತ್ವ

ಅಂದರೆ ಬ್ಯಾಂಕುಗಳು ಬರೀ ಕಾರ್ಯಾಚರಣೆಯ ಯೋಜನೆಗಳನ್ನು ಆರಂಭಿಸಿದರೆ ಸಾಲದು. ಅದರ ರಚನೆ ಹಾಗೂ ಅನುಷ್ಠಾನದಲ್ಲಿ ಎಲ್ಲ ನೌಕರರೂ ಪರಿಣಾಮಕಾರಿಯಾಗಿ ಪಾಲ್ಗೊಳ್ಳಬೇಕು. ಹಾಗಾದಲ್ಲಿ ಮಾತ್ರ ನೌಕರರ ಪ್ರಗತಿಗೆ ಅಗತ್ಯವಾದ ಸವಾಲು ಲಭಿಸಿ ಅವರ ಮುನ್ನಡೆ ಸಾಧ್ಯ. ಆದುದರಿಂದ ವಿಕಾಸಕ್ಕಾಗಿ ಸಹಭಾಗಿತ್ವ ತತ್ವದ ಅರಿವು ಎಲ್ಲರಿಗೂ ಆಗಬೇಕು. ಇದು ಜೇಸಿ ಸಂಸ್ಥೆಯ ತತ್ವವಾಗಿದೆ. ಜೇಸಿ ಸಂಸ್ಥೆ ಒಂದು ವೈಯಕ್ತಿಕ ಅಭಿವೃದ್ಧಿ ಸಂಸ್ಥೆ. ವಿವಿಧ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸುವಲ್ಲಿ ಸದಸ್ಯರಿಗೆ ಪಾತ್ರ ನೀಡಿ ಹಾಗೂ ತರಬೇತಿಯ ಮೂಲಕ ಮತ್ತು ಯೋಜನೆಗಳ ತಯಾರಿ ಹಾಗೂ ಅನುಷ್ಠಾನದಲ್ಲಿ ಎದುರಾಗುವ ಸವಾಲುಗಳಿಗೆ ಯುವಕ ಸದಸ್ಯರನ್ನು ಒಡ್ಡಿ ಅವರ ವೈಯಕ್ತಿಕ ಅಭಿವೃದ್ಧಿಯನ್ನು ಜೇಸಿ ಸಂಸ್ಥೆ ಸಾಧಿಸುತ್ತದೆ. ಬ್ಯಾಂಕುಗಳು ಕೂಡ ಈ ಸಹಭಾಗಿತ್ವ ತತ್ವವನ್ನು ಅಳವಡಿಸಿಕೊಳ್ಳಬಹುದು. ಕಾರ್ಯಾಚರಣೆಯ ಯೋಜನೆ ಒಂದು ಬ್ಯಾಂಕಿನ ಮತ್ತು ಅದರಲ್ಲಿ ದುಡಿಯುವ ಎಲ್ಲ ನೌಕರರ ಪ್ರಗತಿಯನ್ನು ಸಮಕಾಲಿಕವಾಗಿ ಸಾಧಿಸಲು ಇರುವ ಏಕ ಮಾತ್ರ ಕೌಶಲ. ತಮ್ಮ ವೈಯಕ್ತಿಕ ವಿಕಸನಕ್ಕಾಗಿ, ಸ್ವಂತ ಪ್ರತಿಭೆಯ ವೃದ್ಧಿಗಾಗಿ ನೌಕರರು ಇಂಥ ಕಾರ್ಯಾಚರಣೆಯ ಯೋಜನೆಗಳಲ್ಲಿ ಅವುಗಳ ರಚನೆ ಹಾಗೂ ಅನುಷ್ಠಾನದಲ್ಲಿ ಹೆಚ್ಚು ಹೆಚ್ಚು ಭಾಗವಹಿಸಬೇಕು. ಅಂಥ ಸಹಭಾಗಿತ್ವದಿಂದ ತಮ್ಮ ಮುನ್ನಡೆ ಸಾಧ್ಯವೆಂದು ತಿಳಿದುಕೊಂಡಾಗ ಮಾತ್ರ ನೌಕರರು ಯೋಜನೆಗಳ ರಚನೆ ಹಾಗೂ ಅನುಷ್ಠಾನದಲ್ಲಿನ ಸವಾಲುಗಳನ್ನು ಆರಿಸಿಕೊಂಡು ಹೋದಾರು. ಆದುದರಿಂದ ಈ ದಿಸೆಯಲ್ಲಿ ಬ್ಯಾಂಕಿನ ಎಲ್ಲ ಜನರಿಗೆ ಸಾಕಷ್ಟು ತಿಳುವಳಿಕೆ ನೀಡುವುದು ಅವಶ್ಯ. ಈ ದಿಸೆಯಲ್ಲಿ ಸಾರ್ವಜನಿಕ ರಂಗದ ಬ್ಯಾಂಕುಗಳಿಗೆ ತುಂಬ ಜವಾಬ್ದಾರಿ ಇದೆ.

ಬ್ಯಾಂಕುಗಳು ತರಬೇತಿಯ ಮೂಲಕ, ವಾರ್ತಾ ಪತ್ರಗಳ ಮೂಲಕ, ವಿಶೇಷ ಕರಪತ್ರಗಳ ಮೂಲಕ ಕಾರ್ಯಾಚರಣೆಯ ಯೋಜನೆಯ ತ್ರಿವಿಧ ಉದ್ದೇಶಗಳನ್ನು ವಿವರಿಸಿ ಅದು ಎಲ್ಲ ನೌಕರರಿಗೂ ಅರ್ಥವಾಗುವಂತೆ ಮಾಡಬೇಕು. ಪ್ರಾದೇಶಿಕ ಭಾಷೆಗಳಲ್ಲೂ ಪ್ರಕಟನೆಗಳನ್ನು ಹೊರತರಬೇಕು. ಬ್ಯಾಂಕುಗಳಲ್ಲಿ ಜನನಿರ್ವಾಹಕರು ಈ ದಿಸೆಯಲ್ಲಿ ಕೆಲಸ ಮಾಡಬೇಕು.

### ನಾಯಕತ್ವ

ಜನನಿರ್ವಹಣಾರಂಗದಲ್ಲಿ ಒಂದು ಮಹತ್ತರ ಅಂಶವೆಂದರೆ ಪ್ರತಿ ಅಧಿಕಾರಿಯೂ ತನ್ನನ್ನು ತನ್ನ ಸಹೋದ್ಯೋಗಿಗಳ ಗುಂಪಿನ ನಾಯಕನೆಂದು ಪರಿಗಣಿಸಿಕೊಳ್ಳುವುದು. ತಾನು ಮೇಲಧಿಕಾರಿ, ನೌಕರರು ತನ್ನ ಕೈಕೆಳಗಿನವರು ಎಂಬ ಭಾವನೆ ಸಲ್ಲದು. ಹೀಗೆ ಭಾವಿಸಿದರೆ ಉತ್ತಮ ಆಡಳಿತ ಸಾಧ್ಯವಿಲ್ಲ. ಪ್ರತಿ ಅಧಿಕಾರಿಯೂ ನಾಯಕನಿಗೆ ಬೇಕಾದ ಎಲ್ಲ ಗುಣಗಳನ್ನೂ ಪಡೆದುಕೊಳ್ಳುವಂತೆ ಜನ ನಿರ್ವಹಣಾ ವಿಭಾಗ ಮಾಡಬೇಕು. ಏಕೆಂದರೆ ಜನ ನಿರ್ವಹಣೆ ಬಹಳ ಕ್ಲಿಷ್ಟವಾದ ಕಾರ್ಯ. ಇದನ್ನು ಅತಿ ಜಾಗರೂಕತೆಯಿಂದ ಮಾಡಬೇಕು. ಹಿಂದೆ ಒಡೆಯರು ಮತ್ತು ಕೆಲಸಗಾರರ ನಡುವೆ ಒಡೆಯ ಮತ್ತು ಗುಲಾಮರ ಸಂಬಂಧ ಇತ್ತು. ಆಮೇಲೆ ಧನಿ ಮತ್ತು ಕೆಲಸಗಾರ ಸಂಬಂಧ ಬೆಳೆಯಿತು. ಆ ತರುವಾಯ ಕೆಲಸ ಮಾಡಿಸುವವರ ಮತ್ತು ನೌಕರರ ಸಂಬಂಧದ ಸೃಷ್ಟಿಯಾಯಿತು. ಇವೆಲ್ಲ ಹೋಗಿ, ಸಹೋದ್ಯೋಗಿ–ಸಹೋದ್ಯೋಗಿ ಸಂಬಂಧ ಮಾತ್ರವಿದೆ. ಇದನ್ನು ಎಲ್ಲ ಅಧಿಕಾರಿಗಳು ಅರ್ಥ ಮಾಡಿಕೊಂಡು, ನಿಜವಾದ ನಾಯಕರುಗಳಾಗಿ ಕೆಲಸ ಮಾಡಬೇಕು.

ಪ್ರಜಾಪ್ರಭುತ್ವ ಪದ್ಧತಿಯನ್ನು ನಾಯಕ ಅನುಸರಿಸಬೇಕು. ನೌಕರ ನಿರ್ವಹಣೆಯಲ್ಲಿ ಪ್ರಜಾಪ್ರಭುತ್ವ ರೀತಿಯ ಕಾರ್ಯಾಚರಣೆ ಬಹಳ ಅಗತ್ಯ. ಹೊಸ ನಿರ್ಣಯಗಳನ್ನು ಮಾಡುವಾಗ ಮತ್ತು ಹೊಸ ಯೋಜನೆಗಳನ್ನು ಆರಂಭಿಸುವಾಗ ಎಲ್ಲ ಸಹೋದ್ಯೋಗಿಗಳೊಂದಿಗೆ ಚರ್ಚಿಸಿ, ಅವರ ಸಹಭಾಗಿತ್ವವನ್ನು ಪಡೆಯುವುದು ಒಳ್ಳೆಯದು. ಅವರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಬೇಕು. ಎಲ್ಲ ಉದ್ಯೋಗಿಗಳ ಸಲಹೆ ಸೂಚನೆಗಳನ್ನು ಸಂಗ್ರಹಿಸಿ, ಉತ್ತಮ ಸಲಹೆಗಳನ್ನು ಅನುಷ್ಠಾನಕ್ಕೆ ತರಬಹುದು. ಇದರಿಂದ ಸಹಭಾಗಿತ್ವ ಹೆಚ್ಚುವುದಲ್ಲದೆ ನೌಕರರ ಆವಿಷ್ಕಾರ ಶಕ್ತಿಗೂ ಪುಷ್ಟಿಯನ್ನು ನೀಡಿದಂತಾಗುತ್ತದೆ.

ಯಾವುದೇ ವೇಳೆ ನೌಕರರು ಕೆಲಸದಲ್ಲಿ ತಪ್ಪುಗಳನ್ನು ಮಾಡಿದರೆ ಆ ತಪ್ಪುಗಳ ಮೇಲೆ ಹೋರಾಟ ನಡೆಸಬೇಕೇ ವಿನಾ ವ್ಯಕ್ತಿಗಳ ಮೇಲೆ ಅಲ್ಲ. ವ್ಯಕ್ತಿಗಳು ತಪ್ಪು ಮಾಡಲು ಅನೇಕ ಕಾರಣಗಳಿರಬಹುದು. ಅವರಿಗೆ ಮನೆಯಲ್ಲಿ ದೊಡ್ಡ ಆಘಾತ ಸಂಭವಿಸಿರಬಹುದು. ಅಥವಾ ಅವರಿಗೆ ತಮ್ಮವೇ ಆದ ಸಮಸ್ಯೆಗಳಿರಬಹುದು. ಆದುದರಿಂದ ನಾಯಕ ತಪ್ಪುಗಳಿಗೆ ಕಾರಣಗಳನ್ನು ಕಂಡುಹಿಡಿಯಬೇಕು. ಆಮೇಲೆ ಆ ಕಾರಣಗಳನ್ನು ಹೋಗಲಾಡಿಸಲು ಯತ್ನಿಸಬಹುದು. ದಕ್ಷತೆಗೆ ಉತ್ತಮ ಕಾರ್ಯವಿಧಾನಗಳೂ ಇರಬೇಕು. ಕೆಲಸದ ವಿಧಾನಗಳಲ್ಲಿ ನ್ಯೂನತೆಗಳಿದ್ದರೆ ಅವನ್ನು ಹೋಗಲಾಡಿಸಲು ಯತ್ನಿಸಬೇಕು. ಈ ರೀತಿ ಮಾಡುವುದರಿಂದ ಬ್ಯಾಂಕ್ ಅಧಿಕಾರಿಗಳು ನಿಜವಾದ ನಾಯಕತ್ವ ಪಡೆದು ತಮ್ಮ ಸಹೋದ್ಯೋಗಿಗಳ ವಿಶ್ವಾಸಕ್ಕೆ ಪಾತ್ರರಾದಾರು. ಹಾಗಾದಲ್ಲಿ ಜನನಿರ್ವಹಣೆ ಯಶಸ್ವಿಯಾಗುವುದೆನ್ನಬಹುದು.

## ಮುಕ್ತ ನಿರ್ವಹಣೆ

ಈ ದಿನಗಳಲ್ಲಿ ಪ್ರಾಧಾನ್ಯವಿರುವುದು ಮುಕ್ತ ನಿರ್ವಹಣೆಗೆ. ಅಂಕಿ ಅಂಶಗಳನ್ನು ಮತ್ತು ಸುದ್ದಿಸಾರಗಳನ್ನು ಎಲ್ಲರಿಗೂ ದೊರೆಯುವಂತೆ ಮಾಡಬೇಕು. ಇವನ್ನು ರಹಸ್ಯವಾಗಿ ಇಡುವುದರಿಂದ ಕಛೇರಿಗಳಲ್ಲಿ ಸಂಶಯದ ವಾತಾವರಣ ಬೆಳೆಯಬಹುದು. ಇದಕ್ಕಾಗಿ ಉತ್ತಮ ರೀತಿಯ ಸಂಪರ್ಕ ವಿಧಾನ ಪ್ರತಿ ಬ್ಯಾಂಕಿನಲ್ಲೂ ಇರಬೇಕು. ನೌಕರರಿಗೆ ಸುದ್ದಿ ಸಾರಗಳನ್ನು ತಲುಪಿಸಲು ಪರಿಪತ್ರಗಳನ್ನೂ ತಮ್ಮದೇ ಆದ ನಿಯತಕಾಲಿಕಗಳನ್ನೂ ಬ್ಯಾಂಕುಗಳು ಬಳಸಬಹುದು. ಇಂಥ ಮುಕ್ತ ನಿರ್ವಹಣೆಯಿದ್ದರೆ, ಉತ್ತಮ ಮತ್ತು ಪರಿಣಾಮಕಾರಿ ಸಂಪರ್ಕ ವಿಧಾನವಿದ್ದರೆ ಎಲ್ಲ ನೌಕರರೂ ತಾವು ಒಂದೇ ಸಂಸ್ಥೆಯ ಸದಸ್ಯರು ಎಂಬ ಭಾವನೆ ಬೆಳೆಸಿಕೊಳ್ಳಲು ಸಾಧ್ಯ. ಇಲ್ಲದಿದ್ದರೆ ನೌಕರರು ಸುಳ್ಳು ಸುದ್ದಿಗಳನ್ನೂ ಗಾಳಿ ಸುದ್ದಿಗಳನ್ನೂ ನಂಬುವರು. ಇದು ತೀರಾ ಹಾನಿ. ಸಾಧನೆಗಳ ಕುರಿತಾಗಿ, ಶಾಖೆಗಳ ಚಟುವಟಿಕೆಗಳ ಕುರಿತಾಗಿ, ಪ್ರಗತಿಗೆ ವಿಶೇಷ ಕಾಣಿಕೆ ನೀಡಿದ ನೌಕರರ ಮತ್ತು ಶಾಖೆಗಳ ಕುರಿತಾಗಿ ಸುದ್ದಿಯನ್ನು ಪ್ರಚುರಪಡಿಸಿ ಎಲ್ಲ ನೌಕರರಿಗೂ ಅದು ತಲುಪುವಂತೆ ಮಾಡಬೇಕು. ಇದು ಅತ್ಯಂತ ಅವಶ್ಯ. ಇದರಿಂದ ಆರೋಗ್ಯಯುತ ಸ್ಪರ್ಧಾ ಮನೋಭಾವವನ್ನು ಬೆಳೆಸಬಹುದು. ಒಟ್ಟಿನಲ್ಲಿ ಇಂದು ನೌಕರ ನಿರ್ವಹಣಾ ತಂತ್ರ ಒಂದು ಹೊಸ ಕೌಶಲವನ್ನು ಮೈಗೂಡಿಸಿಕೊಳ್ಳಬೇಕು. ಅದೇನೆಂದರೆ, ಸಂಸ್ಥೆ ಮತ್ತು ಅದರಲ್ಲಿರುವ ನೌಕರರು ಜೊತೆಯಾಗಿ ಬೆಳೆಯುವಂತೆ ಮಾಡುವುದು. ಇದಕ್ಕಾಗಿಯೇ ಎಲ್ಲ ನೌಕರರಿಗೂ ಮೇಲೆ ಹೇಳಿದ ರೀತಿಯಲ್ಲಿ ಅವಕಾಶಗಳನ್ನೂ ಸವಾಲುಗಳನ್ನೂ ಒದಗಿಸಬೇಕು. ನೌಕರರ ವೈಯಕ್ತಿಕ ಬೆಳವಣಿಗೆ ಅವರ ತಿಳಿವಳಿಕೆಯಲ್ಲಿ ಹೆಚ್ಚಳದ ರೂಪದಲ್ಲಿರಬಹುದು. ಅವರ ಶಕ್ತಿ ಸಾಮರ್ಥ್ಯಗಳಲ್ಲಿ ಹೆಚ್ಚಳದ ರೂಪದಲ್ಲಿರಬಹುದು. ಅಥವಾ ಅವರ ಉತ್ಪಾದಕತ್ವದಲ್ಲಿ ಹೆಚ್ಚಳದ ರೂಪದಲ್ಲಿರಬಹುದು. ಇಂಥ ಪ್ರಗತಿ ಅವರ ನೌಕರಿಯಲ್ಲಿಯ ಪ್ರಗತಿಗೂ ಸಹಾಯಕವಾಗುತ್ತದೆ. ನೌಕರರು ಈ ರೀತಿ ಬೆಳೆದು ಆ ಮೂಲಕ ಸಂಸ್ಥೆಯ ಪ್ರಗತಿಯನ್ನು ಸಾಧಿಸುವಂತಾಗಬೇಕು. ಈ ತತ್ವವನ್ನು ಜನನಿರ್ವಾಹಕರು ಸರಿಯಾಗಿ ಅರ್ಥಮಾಡಿಕೊಳ್ಳಬೇಕು. ಜನನಿರ್ವಾಹಕರು ಮುಂದಿನ ಆಗುಹೋಗುಗಳನ್ನು ಮೊದಲೇ ಊಹಿಸಿಕೊಂಡು ಬೇಕಾದ ಯೋಜಿತ ಕಾರ್ಯಕ್ರಮಗಳನ್ನು ಹಾಕಿಕೊಳ್ಳಬೇಕು. ಇದಕ್ಕೆ ಕಲ್ಪನಾ ಶಕ್ತಿಯೂ ಬೇಕು. ಜನನಿರ್ವಹಣ ವಿಭಾಗ ನೌಕರರ ಆಶೆ ಆಕಾಂಕ್ಷೆಗಳನ್ನು ಸಕಾಲದಲ್ಲಿ ಅರ್ಥಮಾಡಿಕೊಂಡು ಜನನಿರ್ವಹಣ ಕಾರ್ಯ ನೌಕರರ ಬೇಕುಗಳಿಗೆ ಸರಿಯಾಗಿ ಇರುವಂತೆ, ಅವರ ಪ್ರಗತಿಗೆ ಪೂರಕವಾಗಿ ಇರುವಂತೆ ನೋಡಿಕೊಳ್ಳಬೇಕು.

ಈಗಿನ ದಿನಗಳಲ್ಲಿ ಜನ ನಿರ್ವಹಣೆಯೂ ಒಂದು ರೀತಿಯ ಸೇವೆ ಮಾತ್ರ. ಜನನಿರ್ವಹಣ ವಿಭಾಗ ಬರೇ ಅಧಿಕಾರ ಹತೋಟಿಗಳ ಕೇಂದ್ರವಲ್ಲ ಎಂಬ ಸತ್ಯವನ್ನು ಜನನಿರ್ವಾಹಕರು ಮನಗಾಣಬೇಕು. ಹಾಗಾದಲ್ಲಿ ಮಾತ್ರ ಬ್ಯಾಂಕುಗಳಲ್ಲಿ ಜನ ನಿರ್ವಹಣೆ ಸರಿಯಾಗಿ ನಡೆದು ಬ್ಯಾಂಕುಗಳ ಆರೋಗ್ಯಯುತ ಬೆಳವಣಿಗೆಯಾದೀತು.

# ವಿಸ್ತರಣ ಕೌಂಟರ್ ಸೇವೆ

ಎಚ್. ಎಸ್. ಕೃಷ್ಣ

ಬ್ಯಾಂಕು ಇರುವ ಕಡೆ ಗ್ರಾಹಕರು ಬರಬೇಕು. ಆದರೆ ಅನೇಕ ಕಡೆ ಗ್ರಾಹಕರು ಇರುವ ಕಡೆ ಬ್ಯಾಂಕ್ ಬರುತ್ತದೆ. ಇವತ್ತಿನ ದಿನ ನಾವು ಶಾಲಾ ಕಾಲೇಜುಗಳಲ್ಲಿ, ಆಸ್ಪತ್ರೆಗಳಲ್ಲಿ, ಕಾರ್ಖಾನೆಗಳಲ್ಲಿ ಹಾಗೂ ದೊಡ್ಡ ದೊಡ್ಡ ಉದ್ಯಮ ಕೇಂದ್ರಗಳಲ್ಲಿ ಬ್ಯಾಂಕುಗಳನ್ನು ನೋಡುತ್ತೇವೆ. ಇವೆಲ್ಲಾ ಬ್ಯಾಂಕಿನ ವಿಸ್ತರಣ ಕೌಂಟರುಗಳು (ಎಕ್ಸ್‌ಟೆನ್‌ಷನ್ ಕೌಂಟರ್). ಶಾಲೆಯಲ್ಲಿ ಶುಲ್ಕ ಪಡೆದುಕೊಳ್ಳುವುದು, ಫ್ಯಾಕ್ಟರಿ ಹಾಗೂ ಇನ್ನಿತರ ಉದ್ಯಮ ರಂಗಗಳಲ್ಲಿ ನೌಕರರಿಗೆ ಸಂಬಳ ಹಂಚುವ ಜವಾಬ್ದಾರಿ ತೆಗೆದುಕೊಳ್ಳುವುದು, ಆಸ್ಪತ್ರೆಗಳಲ್ಲಿ ಹಣಕಾಸಿನ ತಲೆನೋವನ್ನು ಸಿಬ್ಬಂದಿಯಿಂದ ವಹಿಸಿಕೊಂಡು ಅವರಿಗೆ ತಮ್ಮ ಸೇವೆ ಮಾಡಲು ಅನುಕೂಲ ಮಾಡುವುದು ಇವೆಲ್ಲ ಇಂದಿನ ಬ್ಯಾಂಕಿಂಗ್ ಸೇವಾ ಸೌಲಭ್ಯದ ಮುಖಗಳು. ಹಣವನ್ನು ಸುಭದ್ರವಾಗಿ ಇಟ್ಟುಕೊಳ್ಳುವುದು ಮಾತ್ರ ಬ್ಯಾಂಕಿನ ಧ್ಯೇಯವಲ್ಲವೆನ್ನುವುದಕ್ಕೆ ಇವಕ್ಕಿಂತ ನಿದರ್ಶನ ಬೇಕೆ?

ಬ್ಯಾಂಕಿನ ವಿಸ್ತರಣ ವಿಭಾಗದಲ್ಲಿ ಸಿಗುವ ಅನುಭವ, ಅದರ ಸಮಸ್ಯೆಗಳು, ಗ್ರಾಹಕರೊಂದಿಗೆ ಸಂಬಂಧ ಹಾಗೂ ಅದರ ಬೆಳವಣಿಗೆಯ ಬಗ್ಗೆ ಕೆಲವು ಮಾತುಗಳನ್ನು ತಿಳಿಸುವುದು ಅಥವಾ ಸಹೋದ್ಯೋಗಿಗಳೊಡನೆ ಹಂಚಿಕೊಳ್ಳುವುದು ಈ ಲೇಖನದ ಉದ್ದೇಶ.

ಸಾಧಾರಣವಾಗಿ ವ್ಯವಹಾರಕ್ಕಾಗಿ ಬಾಗಿಲು ತೆರೆದು ಕುಳಿತಿರುವ ಶಾಖೆಯ ಕೌಂಟರಿಗೂ ಈ ವಿಸ್ತರಣ ಕೌಂಟರಿಗೂ ಬಹಳ ವ್ಯತ್ಯಾಸವಿದೆ. ನಾವಾಗೇ ಒಂದು ಫ್ಯಾಕ್ಟರಿಯಲ್ಲಾಗಲಿ, ಒಂದು ವಿದ್ಯಾ ಸಂಸ್ಥೆಯಲ್ಲಾಗಲಿ ವಿಸ್ತರಣ ವಿಭಾಗವನ್ನು ತೆರೆದರೆ ಅಲ್ಲಿಯ ಸಿಬ್ಬಂದಿಯವರು ಅಥವಾ ಅದಕ್ಕೆ ಸಂಬಂಧಪಟ್ಟವರು ಬ್ಯಾಂಕಿನಿಂದ ಹೆಚ್ಚು ವೈಯಕ್ತಿಕ ಸೇವೆ ಬಯಸುತ್ತಾರೆ ಅಥವಾ ನಿರೀಕ್ಷಿಸುತ್ತಾರೆ. ತಮಗಾಗಿಯೇ ಬ್ಯಾಂಕ್ ಬಂದಿದೆ ಎಂಬ ಅಂಶದಿಂದಾಗಿ ಈ ನಿರೀಕ್ಷಣೆ ಸಹಜವೆ.

ಬ್ಯಾಂಕಿನ ನಿಯಮಗಳು ಅನೇಕ ವೇಳೆ ಗ್ರಾಹಕರ ಕೋಪಕ್ಕೆ ಕಾರಣವಾಗುವುದು ಅಪರೂಪವೇನಲ್ಲ. ಒಂದು ಕಡೆ ಪಾಲಿಸಬೇಕಾದ ನಿಯಮಗಳು, ಮತ್ತೊಂದು ಕಡೆ ಸೇವೆಯೊಂದನ್ನೇ ನಿರೀಕ್ಷಿಸುವ ಗ್ರಾಹಕ. ಈ ಮಧ್ಯೆ ಸಿಕ್ಕಿಕೊಂಡ ಬ್ಯಾಂಕ್ ನೌಕರ (ಎಲ್ಲಾ ದರ್ಜೆಗೂ ಅನ್ವಯ). ಉದಾಹರಣೆಗೆ—ಹಣ ತೆಗೆದುಕೊಳ್ಳಲು ಪಾಸ್ ಪುಸ್ತಕ ತರಬೇಕೆನ್ನುವುದು ನಿಯಮ. ಇದು ಎಲ್ಲ ಗ್ರಾಹಕರಿಗೂ ತಿಳಿದ ವಿಷಯ. ಆದರೆ ವಿಸ್ತರಣ ಕೇಂದ್ರಗಳಲ್ಲಿ ನೌಕರರಾದ ನಮ್ಮ ಗ್ರಾಹಕರು ಬಹಳ ಸಾರಿ ಕೊಡುವ ಏಕೈಕ ನೆಪ: "ಸಾರ್ ಪಾಸ್ ಪುಸ್ತಕ ಮನೇಲಿ ಮರೆತು ಬಂದುಬಿಟ್ಟೆ. ಇದೊಂದು ಸಾರಿ ಹಣ ಕೊಟ್ಟುಬಿಡಿ." ಫ್ಯಾಕ್ಟರಿಗೆ ಬರುವ ಅವಸರದಲ್ಲಿ ಒಮ್ಮೊಮ್ಮೆ ಹೀಗಾಗಿರಬಹುದು. ಆದರೆ ಎಷ್ಟೋ ಜನ ಈ ನೆಪವನ್ನು ಯಾವಾಗಲೂ ಮುಂದೊಡ್ಡಿದರೆ ಹೇಗೆ? ಒಂದಿಬ್ಬರಿಗೆ, ಒಂದೆರಡು ಬಾರಿ ನಿಯಮವನ್ನು ಬದಿಗೊತ್ತಿ ಸಹಾಯ ಮಾಡುವುದು ಸರಿ. ಆದರೆ ಬ್ಯಾಂಕಿನವರು ಕೆಲವರಿಗೆ ಕೊಡುವುದಿಲ್ಲ ಎಂದು ಪಾಸ್ ಪುಸ್ತಕ ಇಲ್ಲದೆ ಕೊಡುತ್ತಾರೆ, ಮತ್ತೆ ಕೆಲವರಿಗೆ ಕೊಡುವುದಿಲ್ಲ ಎಂದು ಮಿಕ್ಕವರು ದೂಷಿಸುತ್ತಾರೆ. ಪಾಸ್ ಪುಸ್ತಕ ತೆಗೆದುಕೊಳ್ಳದೆ ಬರುವುದಕ್ಕೆ ಇನ್ನೊಂದು ನೆಪ: "ಸಾರ್ ನಾನು ಇವತ್ತು ಹಣ ತೆಗೆಯಬೇಕೆಂದುಕೊಂಡಿರಲಿಲ್ಲ. ಆದರೆ ನನ್ನ ಸ್ನೇಹಿತ ಇವನು. ಹಣ ಅರ್ಜೆಂಟಾಗಿ ಕೇಳಿದ. ಅದ್ದರಿಂದ ಇದ್ದಕ್ಕಿದ್ದ ಹಾಗೆ ಬರಬೇಕಾಯಿತು, ನೀವು ಒಪ್ಪಿದರೆ ಇವನಿಗೆ ಸಹಾಯ ಆಗುತ್ತೆ. ನಾಳೆ ಖಂಡಿತ ಪಾಸ್ ಪುಸ್ತಕ ತಂದು ಬರೆಸಿಕೊಳ್ಳುತ್ತೇನೆ." ಹೀಗೆಂದು ಹೇಳಿ ನಮ್ಮ ಕರುಣೆಯನ್ನು ಪರೀಕ್ಷಿಸುತ್ತಾರೆ. ಕೆಲವು ವೇಳೆ ಹಾಗೆ ಉಪಕಾರ ಮಾಡಿದರೆ, ನಮ್ಮಿಂದ ಸ್ವಲ್ಪ ಮರೆಯಾಗಿ ಎಲ್ಲ ಹಣವನ್ನೂ ತಮ್ಮ ಜೇಬಿಗೆ ಸೇರಿಸುತ್ತಾರೆ. ತಮ್ಮ ಅಪರಾಧಭಾವಕ್ಕೋಸ್ಕರ ಒಮ್ಮೊಮ್ಮೆ ಈ ನಾಟಕವಾಡುವವರು ಇದ್ದಾರೆ.

ವಿಸ್ತರಣ ವಿಭಾಗಗಳಲ್ಲಿ ಮತ್ತೊಂದು ಅನುಭವವೆಂದರೆ ಸಾಮಾನ್ಯವಾಗಿ ಅಧಿಕಾರಿ ಸ್ಥಾನದಲ್ಲಿರುವವರು ತಮ್ಮ ಬ್ಯಾಂಕಿಂಗ್ ವ್ಯವಹಾರಕ್ಕೆ ಯಾವಾಗಲೂ ತಮ್ಮ ಕೆಳಗಿನವರನ್ನು ನಮ್ಮ ವಿಸ್ತರಣ ವಿಭಾಗಕ್ಕೆ ಕಳುಹಿಸುತ್ತಾರೆ. ಈ ಕೆಲಸದಲ್ಲೂ ತಮ್ಮ ಕಛೇರಿಯ ಕೆಲಸದಲ್ಲಿ ನೆರವಾಗುವ ನಾಲ್ಕನೆ ದರ್ಜೆಯ ನೌಕರರನ್ನು ಪ್ರತಿನಿಧಿಯಾಗಿ ಕಳುಹಿಸು

ತ್ತಾರೆ. ಜವಾನರು ತಮ್ಮ ಮುಖ್ಯಸ್ಥರ ಮೇಲೆ ಗೊಣಗಾಡುತ್ತ ಬಂದು ಬ್ಯಾಂಕಿನವರನ್ನು ಆದಷ್ಟು ಬೇಗ ಕೆಲಸ ಮಾಡಿಕೊಡಬೇಕೆಂದು ಕೇಳುತ್ತಾರೆ. ಮೊದಲು ಬಂದವನಿಗೆ ಮೊದಲ ಸೇವೆ ಎನ್ನುವ ಪದ್ಧತಿ ಇವರಿಗೆ ಬೇಡ, ಇವರಿಗೆ ತಮ್ಮ ಬಾಸ್ ಆದಷ್ಟು ಬೇಗ ಬರಬೇಕೆಂದು ಹೇಳಿದ ಆಜ್ಞೆಯ ಬಗ್ಗೆ ಮಾತ್ರ ಆತಂಕ. ಹೀಗಾಗಿ ಅನೇಕ ವೇಳೆ ಅಂಥವರೊಂದಿಗೆ ಬ್ಯಾಂಕಿನ ಸಿಬ್ಬಂದಿ ಮಾತಿನ ಚಕಮಕಿ ನಡೆಸಬೇಕಾದ ಸನ್ನಿವೇಶಗಳು ಬರುತ್ತವೆ. ಈ ವಾತಾವರಣಕ್ಕೆ ಕಾರಣರಾದ ಅಧಿಕಾರಿ-ಗ್ರಾಹಕ ಸ್ವತಃ ತಾವೇ ಬಂದರೆ ಬಹಳ ಸುಲಭದಿಂದ ಕೆಲಸ ಮಾಡಿಕೊಂಡು ಹೋಗಬಹುದು. ಆದರೆ ಕಾರಣಾಂತರದಿಂದ ಆತ ಬರಲಾರ. ಕಛೇರಿಯ ಜವಾಬ್ದಾರಿ ಜಾಸ್ತಿ ಇರಬಹುದು; ಅಥವಾ ತನ್ನ ಅಮೂಲ್ಯವಾದ ವೇಳೆಯನ್ನು ಏಕೆ ವ್ಯರ್ಥಮಾಡಬೇಕು, ಕೆಳಗಿನವರು ಮಾಡಬಹುದಲ್ಲ ಎಂಬ ಧೋರಣೆ ಇರಬಹುದು. ಕಾರಣ ಏನೇ ಇರಲಿ, ಒಮ್ಮೊಮ್ಮೆಯಾದರೂ ಅವರೇ ಬಂದರೆ ಬ್ಯಾಂಕಿನವರಿಗೂ ತೃಪ್ತಿ, ಕೆಳಗಿನವರಿಗೂ ಒಂದು ಸಮಾಧಾನ. ಒಮ್ಮೊಮ್ಮೆ ಆತುರದಲ್ಲಿ ಅಧಿಕಾರಿಗಳು ಚೆಕ್ಕನ್ನು ಸರಿಯಾಗಿ ಬರೆದಿರುವುದಿಲ್ಲ ಅಥವಾ ತಪ್ಪು ದಿನಾಂಕ ಹಾಕಿರುತ್ತಾರೆ. ಹೀಗೆ ಏನಾದರೊಂದು ಇರುತ್ತದೆ. "ಇದು ಸರಿಯಿಲ್ಲ. ಸರಿ ಮಾಡಿಸಿಕೊಂಡು ಬನ್ನಿ" ಎಂದು ಹೇಳಿದರೆ ತಾವು ಮತ್ತೆ ಓಡಾಡಬೇಕಲ್ಲ ಎಂದು ಬ್ಯಾಂಕಿನ ಸಿಬ್ಬಂದಿಯ ಮೇಲೆ ರೇಗಾಡುತ್ತಾರೆ. ವಸ್ತುಸ್ಥಿತಿ ಅರ್ಥ ಮಾಡಿಕೊಳ್ಳುವ ವ್ಯವಧಾನವಿರುವುದಿಲ್ಲ ಅವರಲ್ಲಿ. ಹೀಗೆ ರೇಗಿಸಿಕೊಳ್ಳಬೇಕಾದ ಬ್ಯಾಂಕ್ ನೌಕರನಿಗೂ ಒಮ್ಮೊಮ್ಮೆ ರೇಗುತ್ತದೆ. ಇವೆಲ್ಲ ಸಾಮಾನ್ಯ ಕಹಿ ಅನುಭವಗಳು. ವಿಸ್ತರಣ ವಿಭಾಗಗಳಲ್ಲಿ ಎಲ್ಲಾ ಅಧಿಕಾರಿಗಳೂ ಒಂದೇ ರೀತಿಯಲ್ಲ. ಕೆಲವರು ಪ್ರತಿ ಬಾರಿಯೂ ತಾವೇ ಕೌಂಟರಿಗೆ ಬರುತ್ತಾರೆ. ಅವರು ತಮ್ಮ ಕೆಳಗಿನವರನ್ನು ನಂಬಲಾರದೆ ಹಾಗೆ ಮಾಡುತ್ತಾರೆ, ಅಥವಾ ತಮ್ಮ ಸೌಜನ್ಯದ ಸ್ವಭಾವದಿಂದ ಹಾಗೆ ಬರುತ್ತಾರೆ. ಅಂಥವರು ಬಂದಾಗ ಇನ್ನುಳಿದ ಗ್ರಾಹಕರು ಎದ್ದು ಅವರಿಗೆ ಜಾಗ ಕೊಡುವುದು ಮಾತ್ರವಲ್ಲ, ಅವರು ಕುಳಿತರೆ ತಾವು ನಿಂತುಕೊಳ್ಳುತ್ತಾರೆ. ಅವರ ಸಮಕ್ಕೆ ಕುಳಿತುಕೊಳ್ಳುವುದು ಅವರಿಂದಾಗದು. ಬ್ಯಾಂಕಿಗೆ ಎಲ್ಲ ಗ್ರಾಹಕರೂ ಒಂದೇ ಎಂದು ನಾವು ಆಗ ವರ್ತಿಸಿದರೆ ನೌಕರರೇ ಅದನ್ನು ಒಪ್ಪಲಾರರು. ಅವರಿಗೆ ಅದು ಬ್ಯಾಂಕ್ ಅನ್ನಿಸುವುದೇ ಇಲ್ಲ. ಏಕೆಂದರೆ ಎಷ್ಟಾದರೂ ಅದು ಅವರ ಉದ್ಯಮದ ಒಂದು ಭಾಗ.

ಅನೇಕ ನೌಕರರು ಗುಂಪುಗುಂಪಾಗಿ ಸ್ನೇಹಿತರೊಂದಿಗೆ ಒಟ್ಟಿಗೆ ಕೌಂಟರಿಗೆ ಬರುವುದೂ ಬಂದು ಮಾತನಾಡಲು ಕುಳಿತುಕೊಳ್ಳುವುದೂ ವಿಸ್ತರಣ ವಿಭಾಗದ ವಿಶಿಷ್ಟ ಅನುಭವ. ತಮ್ಮ ಕೇಂದ್ರದ ರಾಜಕೀಯವನ್ನೆಲ್ಲಾ ನಮ್ಮ ಮುಂದೆ ಕೆಡವುತ್ತಾರೆ. ಹೀಗೆ ಮಾತನಾಡುತ್ತಿರುವಾಗ ತಮ್ಮ ಮೇಲ್ಪಟ್ಟವರು ಬ್ಯಾಂಕಿಗೆ ಬರುತ್ತಿದ್ದಾರೆಂದು ಸುಳಿವು ಸಿಕ್ಕರೆ ಎಲ್ಲಾ ಚೆಲ್ಲಾಪಿಲ್ಲಿ. ಹೆಚ್ಚು ಕೆಲಸವಿಲ್ಲದಿದ್ದಾಗ ಬ್ಯಾಂಕ್ ಸಿಬ್ಬಂದಿಗೆ ಇದೊಂದು ಸಮಯ ಕೊಲ್ಲುವ ಆಯುಧ. ಆದರೆ ಕೆಲಸ ಜಾಸ್ತಿಯಿದ್ದಾಗ ಸ್ವಲ್ಪ ಸಮಸ್ಯೆ. ಆದರೆ ನಮಗೆ ಬಹಳ ಕೆಲಸವಿದೆ ಎಂದು ತೋರ್ಪಡಿಸಿಕೊಂಡರೆ ನೌಕರರು ತಾವಾಗೇ ಅಥವಾ ಆ ಗುಂಪಿನಲ್ಲಿರುವ ಒಂದಿಬ್ಬರ ತಿಳುವಳಿಕೆಯಿಂದ ಅಲ್ಲಿಂದ ಕಾಲ್ತೆಗೆಯುವುದು ಖಂಡಿತ.

ದೊಡ್ಡ ದೊಡ್ಡ ವಿಸ್ತರಣ ವಿಭಾಗಗಳು ಪ್ರತ್ಯೇಕವಾಗಿ ಕಾರ್ಯ ನಿರ್ವಹಿಸುತ್ತವೆ. ಆದರೆ ಕೆಲವು ವಿಸ್ತರಣ ವಿಭಾಗಗಳು ತಮ್ಮ ಮುಖ್ಯ ಶಾಖೆಗಳ ಭಾಗಗಳಾಗಿ ಕೆಲಸ ಮಾಡುತ್ತವೆ. ಅಂಥ ವಿಭಾಗಗಳ ವ್ಯವಸ್ಥೆಯಲ್ಲಿ ಕೆಲವು ಸಮಸ್ಯೆಗಳಿರುತ್ತವೆ. ಸಿಬ್ಬಂದಿಯನ್ನು ಕಳುಹಿಸುವ ವಿಷಯದಲ್ಲಿ ಒಮ್ಮೊಮ್ಮೆ ಸಮಸ್ಯೆ ಬರುತ್ತದೆ. ಹಣ ಕೊಂಡೊಯ್ಯಲು ಎಷ್ಟೋ ಬ್ಯಾಂಕ್‌ಗಳಲ್ಲಿ ಅವರವೇ ಆದ ವಾಹನಗಳಿರುವುದಿಲ್ಲ. ಆಟೋರಿಕ್ಷಾಗಳನ್ನು ಮಾಡಿಕೊಂಡು ಹೋಗಬೇಕಾಗುವುದು. ರಕ್ಷಣಾ ವ್ಯವಸ್ಥೆಯ ಬಗ್ಗೆ ಸಿಬ್ಬಂದಿಗೆ ಆತಂಕವಿರುತ್ತದೆ. ಹಣಕ್ಕಾಗಿ ಏನು ಮಾಡಲೂ ಸಿದ್ಧವಿರುವ ಈ ಕಾಲದಲ್ಲಿ ಭಯ ಸಹಜವೇ. ಬ್ಯಾಂಕಿನಲ್ಲಿ ವಿಸ್ತರಣ ವ್ಯವಸ್ಥೆಗೆ "ಏನಯ್ಯ ಎಕ್ಸ್‌ಟ್ರಾ-ಟೆನ್ಷನ್ (ಎಕ್ಸ್‌ಟೆನ್ಷನ್ ಅನ್ನುವುದಕ್ಕೆ ಬದಲಾಗಿ) ಕೌಂಟರಿಗೆ ಹೊರಟೆಯಾ?" ಎಂದು ಕೇಳುವುದು ರೂಢಿ.

ಬ್ಯಾಂಕಿನಿಂದ ಹೊರಗೆ ಬಹಳ ದೂರ ಬಂದು ಬಾಗಿಲು ತೆಗೆದು ಕುಳಿತುಕೊಂಡಾಗ ಏನಾದರೂ ಕಹಿ ಪ್ರಸಂಗವಾದರೆ ಅಥವಾ ಅಹಿತಕರ ಮಾತು ಕೇಳಿದರೆ ಸಿಬ್ಬಂದಿಯ ತಾಳ್ಮೆ ತಪ್ಪುವುದು ಸಹಜ. ಕೆಲಸಕ್ಕೆ ಪ್ರತಿಯಾಗಿ ವೇತನ ಸಿಗುತ್ತದೆ. ನಿಜ. ಆದರೆ ಕೆಲಸ ಮಾಡಲು ವಾತಾವರಣ ಬಹು ಮುಖ್ಯ. ಬ್ಯಾಂಕ್ ನೌಕರನೂ ತಾನು ಬ್ಯಾಂಕಿನ ಹೊರಗೆ ಬಂದಿದ್ದೇನೆ, ಇಲ್ಲಿ ಬರುವ ಗ್ರಾಹಕರೂ ನನ್ನ ಸಹೋದ್ಯೋಗಿಗಳಂತೆ ಎಂದು ತಿಳಿದು ಆದಷ್ಟು ಇಲ್ಲಿ ಈ ವ್ಯವಸ್ಥೆಯಲ್ಲಿ ಯಶಸ್ವಿಯಾಗಬೇಕೆಂದು ಪ್ರಯತ್ನಿಸಬೇಕು. ಆಗ ಕೆಲಸ ಸುಗಮ. ಎಂಥ ಸೇವೆ ನೀಡಿದರೂ ಕೆಲವು ಸಿನಿಕ-ಗ್ರಾಹಕರಿರುತ್ತಾರೆ. ಅವರು ಯಾವಾಗಲೂ ಒಡೆದ ಗ್ರಾಮೋಫೋನ್ ತಟ್ಟೆಯಂತೆ "ರಾಷ್ಟ್ರೀಕೃತವಾದ ಮೇಲೆ ಸೇವೆಯೇ ಇಲ್ಲವಾಗಿದೆ" ಎನ್ನುತ್ತಿರುತ್ತಾರೆ. ಅಂಥವರಿಗೆ "ರಾಷ್ಟ್ರೀಕರಣದವಾದ ಮೇಲೆಯೇ ಈ ರೀತಿ ವಿಸ್ತರಣ ವಿಭಾಗಗಳಾಗಿವೆ" ಎನ್ನುತ್ತಿರುತ್ತೇವೆ. ಆದರೂ ಅವರು ಒಪ್ಪುವುದಿಲ್ಲ. "ಆ ಬ್ಯಾಂಕ್ ವಾಸಿ ನಿಮಗಿಂತ" ಎನ್ನುತ್ತಾರೆ. ಪಕ್ಕದ ಕ್ಲಾಸಿನ ಹುಡುಗರೇ ವಾಸಿ, ಗದ್ದಲವಿಲ್ಲ ಎನ್ನುವ ನಮ್ಮ ಪ್ರಾಥಮಿಕ ಶಾಲಾ ಮಾಸ್ತರರ ಮಾತು ನನಗೆ ನೆನಪಾಗುತ್ತದೆ. ಇಂಥ ಗ್ರಾಹಕರ ಆಕ್ಷೇಪಣೆ ಕೇಳುವಾಗ ನಮ್ಮ ಸೇವೆ ಸರಿಯಾಗಿದ್ದರೆ ನಾವು ಅಂಥ ಸಿನಿಕ-ಗ್ರಾಹಕರೊಡನೆ ವಾದ ಮಾಡುವುದು ವ್ಯರ್ಥ.

(ಪುಟ ೨೮ ನೋಡಿ)

# ಸುದ್ದಿ ಸಾರ

**ಸಾ. ಅ. ಮಂಜುನಾಥ**

### ಏಷ್ಯನ್ ತೀರುವೆ ಒಕ್ಕೂಟದ ಆಡಳಿತ ಮಂಡಳಿ ಸಭೆ

ಏಷ್ಯನ್ ತೀರುವೆ ಒಕ್ಕೂಟದ ನಿರ್ದೇಶಕರ ಮಂಡಳಿಯು 10ನೆಯ ಸಭೆ ನವದೆಹಲಿಯಲ್ಲಿ ಫೆಬ್ರವರಿ 11 ಹಾಗೂ 12 ರಂದು ನಡೆಯಿತು. ಸದಸ್ಯ ರಾಷ್ಟ್ರಗಳ ನಡುವೆ ಪರಸ್ಪರ ವ್ಯಾಪಾರ ಸಂಬಂಧಕ್ಕೆ ಉತ್ತೇಜನ ನೀಡುವುದು, ಒಕ್ಕೂಟದಲ್ಲಿ ತೀರುವೆಯಾಗುವ ವಹಿವಾಟುಗಳನ್ನು ಹೆಚ್ಚಿಸುವುದು, ಕಡಿಮೆಯಾಗುತ್ತಿರುವ ವಿದೇಶಿ ವಿನಿಮಯ ಮೂಲಗಳ ಸಂರಕ್ಷಣೆ, ಸದಸ್ಯ ಸಂಖ್ಯೆಯನ್ನು ಹೆಚ್ಚಿಸುವುದು —ಈ ವಿಚಾರಗಳಲ್ಲಿ ಸಾಮಾನ್ಯ ಸಹಮತಿಗೆ ಬರಲಾಯಿತು.

ವಿನಿಮಯ ದರಗಳ ನಿರ್ಧಾರಣೆ, ವಾಯಿದಾ ಖಾತರಿ ನೀಡಿಕೆ ಮತ್ತು ಸದಸ್ಯ ರಾಷ್ಟ್ರಗಳ ನಡುವಿನ ವಹಿವಾಟುಗಳನ್ನು ಒಕ್ಕೂಟದ ಮೂಲಕ ನಡೆಸುವುದನ್ನು ಕಡ್ಡಾಯಗೊಳಿಸುವುದು–ಈ ವಿಷಯಗಳನ್ನು ಪರಿಶೀಲಿಸಲು ತಾಂತ್ರಿಕ ಸಮಿತಿಯೊಂದನ್ನು ಮಂಡಳಿ ನೇಮಿಸಿತು. ಈ ಸಮಿತಿಯಲ್ಲಿ ಪ್ರತಿ ಸದಸ್ಯ ರಾಷ್ಟ್ರದಿಂದಲೂ ಒಬ್ಬ ಸದಸ್ಯರಿರುತ್ತಾರೆ. ಸದಸ್ಯ ರಾಷ್ಟ್ರಗಳಲ್ಲಿ ವ್ಯಾಪಾರ ಮತ್ತು ಪಾವತಿ ವಿಧಾನ ಹಾಗೂ ರೂಢಿಗಳ ಬಗ್ಗೆ ಮಾನಸಿಕ ನಿರ್ಧಾರಣ ಸಾಧ್ಯತೆಯನ್ನು ಪರಿಶೀಲಿಸಿ ಒಕ್ಕೂಟ ವ್ಯಾಪಾರ ಸಂಬಂಧಿ ವಹಿವಾಟು ಮತ್ತಿತರ ವಿಷಯಗಳಲ್ಲಿ ಹೆಚ್ಚಾಗಿ ತೊಡಗಲು ಕೈಗೊಳ್ಳಬೇಕಾದ ಕ್ರಮಗಳನ್ನು ಕುರಿತು ಈ ಸಮಿತಿ ಸಲಹೆ ನೀಡಲಿದೆ.

### ನಗರಾಭಿವೃದ್ಧಿಯ ಬಗ್ಗೆ ವಿಶ್ವ ಬ್ಯಾಂಕಿನ ಚಲನಚಿತ್ರ

'ದಿ ನೇಬರ್‌ಹುಡ್ ಆಫ್ ಕೋಯೆಲೋಸ್' ಎಂಬ, 28 ನಿಮಿಷಗಳ, 16 ಮಿಮೀ. ವರ್ಣ ಸಾಕ್ಷ್ಯ ಚಿತ್ರವನ್ನು ವಿಶ್ವ ಬ್ಯಾಂಕ್ ತಯಾರಿಸಿದೆ. ನಗರದಲ್ಲಿಯ ಕೊಳಚೆ ಪ್ರದೇಶಗಳ ಪುನರ್ವ್ಯವಸ್ಥೆ ಮತ್ತು ನಗರದಲ್ಲಿಯ ಬಡತನ ನಿರ್ಮೂಲನ ಈ ಚಿತ್ರದ ವಸ್ತು. ಅಭಿವೃದ್ಧಿಶೀಲ ಜಗತ್ತಿನಲ್ಲಿ ನಗರಗಳತ್ತ ಜನರ ವಲಸೆಯ ನಿರಂತರ ಏರುವಿಕೆಯ ಪರಿಣಾಮಗಳನ್ನು ಇದರಲ್ಲಿ ಚಿತ್ರಿಸಲಾಗಿದೆ. ಬ್ರಜಿಲ್‌ನ ರೆಸಿಫೆ ಎಂಬ ನಗರದ ಇಂಥ ಸಮಸ್ಯೆಗೆ ಪರಿಹಾರ ವಿಶ್ವ ಬ್ಯಾಂಕಿನ ಯೋಜನೆಯೊಂದರಿಂದ ಹೇಗೆ ದೊರೆಯಿತು ಎಂಬ ಕಥಾಭಿತ್ತಿಯ ಆಧಾರದ ಮೇಲೆ ಈ ಚಿತ್ರದ ವಸ್ತುವನ್ನು ನಿರೂಪಿಸಲಾಗಿದೆ. ಈ ಚಿತ್ರದ ಪ್ರತಿಯನ್ನು ಪ್ರದರ್ಶನಕ್ಕಾಗಿ ಎರವಲು ಪಡೆಯಬಯಸುವವರು ವಿಶ್ವ ಬ್ಯಾಂಕ್, ವಾಕ್‌ಶ್ರವಣ ವಿಭಾಗ, ವಾಷಿಂಗ್‌ಟನ್ ಡಿಸಿ 20433, ಅಮೆರಿಕ ಇವರನ್ನು ಸಂಪರ್ಕಿಸಬಹುದಾಗಿದೆ.

### ನಿರಂತರ ಶಕ್ತಿ ಮೂಲಗಳ ಅಭಿವೃದ್ಧಿಗಾಗಿ ಬ್ಯಾಂಕ್ ಸಾಲಗಳು

ಸೌರ ಅಥವಾ ವಾಯು ಶಕ್ತಿಗಳಂಥ ನಿರಂತರ ಶಕ್ತಿ ಮೂಲಗಳನ್ನಾಧರಿಸಿದ ಉಪಕರಣಗಳ ತಯಾರಿಕೆ ಹಾಗೂ ಬಳಕೆಗೆ ನೆರವಾಗಲು ಆದ್ಯತೆ ನೀಡಬೇಕೆಂದು ವಾಣಿಜ್ಯ ಬ್ಯಾಂಕುಗಳಿಗೆ ರಿಸರ್ವ್ ಬ್ಯಾಂಕ್ ತಿಳಿಸಿದೆ. ಅಂಥ ಉಪಕರಣಗಳೆಂದರೆ ಸಮತಲ ಸೌರ ಸಂಗ್ರಾಹಕಗಳು; ಕೇಂದ್ರೀಕೃತ ಮತ್ತು ಕೊಳವೆ ಮಾದರಿಯ ಸೌರ ಸಂಗ್ರಾಹಕಗಳು; ಸೌರ ಅಡಿಗೆ ಯಂತ್ರಗಳು; ಸೌರ ಜಲೋಷ್ಣಕಗಳು ಹಾಗೂ ಜಲೋಷ್ಣಕ ವ್ಯವಸ್ಥೆಗಳು; ಗಾಳಿ / ಅನಿಲ / ದ್ರವ ಉಷ್ಣ ವ್ಯವಸ್ಥೆಗಳು; ಸೌರ ಶೀತಕ ವ್ಯವಸ್ಥೆ, ತಂಪು ಶೇಖರಗಳು ಮತ್ತು ಹವಾ ನಿಯಂತ್ರಣ ವ್ಯವಸ್ಥೆಗಳು; ಸೌರ ಬೆಳೆ ಒಣಗಿಸುವ ಯಂತ್ರಗಳು ಹಾಗೂ ಅವುಗಳ ವ್ಯವಸ್ಥೆಗಳು; ಗಾಳಿ ಗಿರಣಿಗಳು ಮತ್ತು ಅವುಗಳನ್ನಾಧರಿಸಿ ನಡೆಯಲು ವಿಶೇಷವಾಗಿ ರೂಪಿಸಲಾದ ಉಪಕರಣಗಳು; ವಿದ್ಯುದುತ್ಪಾದಕಗಳು ಹಾಗೂ ಪಂಪುಗಳೂ ಸೇರಿದಂತೆ ವಾಯುಶಕ್ತಿಯನ್ನಾಧರಿಸಿ ನಡೆಯುವ ವಿಶೇಷ ಸಾಧನಗಳು; ಜೈವಿಕ ಅನಿಲ ಸ್ಥಾವರಗಳು ಮತ್ತು ಜೈವಿಕ ಅನಿಲ ಯಂತ್ರಗಳು; ಶಕ್ತಿಯನ್ನು ಉತ್ಪಾದಿಸುವ ರಾಸಾಯನಿಕ ಮತ್ತು ಪೌರ ಕಸ ಪರಿವರ್ತಕ ಸಾಧನಗಳು; ಸಾಗರದಲೆಗಳು ಮತ್ತು ಉಷ್ಣ ಶಕ್ತಿಗಳನ್ನು ಬಳಸಬಲ್ಲ ಸಲಕರಣೆಗಳು; ಮೇಲ್ಕಂಡ ಉಪಕರಣಗಳ ತಯಾರಿಕೆಯಲ್ಲಿ ಬಳಸಲಾಗುವ ಯಂತ್ರ ಮತ್ತು ಸ್ಥಾವರಗಳು.

### ನೋಟು ನಾಣ್ಯಗಳ ಕ್ಷಾಮ–ಕಳವಳಕ್ಕೆ ಕಾರಣವಿಲ್ಲ

ನೋಟು ನಾಣ್ಯಗಳಿಗೆ ಕ್ಷಾಮ ಬರಲಿದೆಯೆಂಬ ಪತ್ರಿಕಾ ವರದಿಗಳ ಬಗ್ಗೆ ಇತ್ತೀಚೆಗೆ ಲೋಕ ಸಭೆಯಲ್ಲಿ ಸದಸ್ಯರು ಅರ್ಥ ಸಚಿವರ ಗಮನ ಸೆಳೆದಾಗ, ಅಂಥ ಆತಂಕಕ್ಕೆ ಆಧಾರ

ವಿಲ್ಲವೆಂದೂ ದೇಶದಲ್ಲಿ ನಾಣ್ಯ ಹಾಗೂ ನೋಟುಗಳ ದಾಸ್ತಾನು ಸಾಕಷ್ಟು ಇದೆಯೆಂದೂ ಸಚಿವರು ತಿಳಿಸಿದರು.

## ಬ್ಯಾಂಕ್ ಶಾಖೆಗಳ ಲೆಕ್ಕ ಪದ್ಧತಿಯ ಅಧ್ಯಯನ

ವಾಣಿಜ್ಯ ಬ್ಯಾಂಕುಗಳಲ್ಲಿಯ ಲೆಕ್ಕ ಪದ್ಧತಿಗಳ ಅಧ್ಯಯನ ನಡೆಸಲು ಕಾರ್ಯತಂಡವೊಂದನ್ನು ರಿಸರ್ವ್ ಬ್ಯಾಂಕ್ ನೇಮಿಸಿದೆ. ಈ ತಂಡ ವಿಶೇಷವಾಗಿ ಗ್ರಾಮೀಣ ಹಾಗೂ ಅರೆ ಪಟ್ಟಣ ಪ್ರದೇಶಗಳ ಶಾಖೆಗಳಲ್ಲಿ ರೋಜು ಪುಸ್ತಕಗಳು, ಉಪಾಂಗ ಪುಸ್ತಕಗಳು, ಪೂರಕ ಪುಸ್ತಕಗಳು, ಸಾಲ ತಾಳೆ ಮತ್ತಿತರ ಲೆಕ್ಕ ಪುಸ್ತಕಗಳನ್ನು ಇಟ್ಟಿರುವ ಪರಿಸ್ಥಿತಿಯನ್ನು ಅಧ್ಯಯಿಸಿ, ರಿಜರ್ವ್ ಬ್ಯಾಂಕು, ಸರಕಾರ ಮತ್ತು ಬ್ಯಾಂಕಿನ ಮುಖ್ಯ ಕಛೇರಿಗಳಿಗೆ ಬೇಕಾಗುವ ಮಾಹಿತಿಗಳನ್ನೂ ಅಂಕಿ ಅಂಶಗಳನ್ನೂ ನೀಡಲು ಅನುಕೂಲಿಸುವ ರೀತಿಯಲ್ಲಿ ಲೆಕ್ಕ ಪುಸ್ತಕಗಳನ್ನು ಇಡುವ ವಿಧಾನಗಳನ್ನೂ ಸಲಹೆ ಮಾಡಲಿದೆ. ಇದರಿಂದಾಗಿ ಆದ್ಯತಾ ಕ್ಷೇತ್ರಗಳಿಗೆ ಒದಗಿಸಲಾದ, ಒದಗಿಸಬೇಕಾದ ನೆರವಿನ ಕುರಿತಾದ ಉಪಯುಕ್ತ ಮಾಹಿತಿಗಳು ಶೀಘ್ರವಾಗಿ ಲಭಿಸುವ ನಿರೀಕ್ಷೆಯಿದೆ.

## ರಾಷ್ಟ್ರೀಯ ಕೃಷಿ ಹಾಗೂ ಗ್ರಾಮಾಭಿವೃದ್ಧಿ ಬ್ಯಾಂಕ್

ರಾಷ್ಟ್ರೀಯ ಕೃಷಿ ಹಾಗೂ ಗ್ರಾಮಾಭಿವೃದ್ಧಿ ಬ್ಯಾಂಕ್ (ನಬಾರ್ಡ್) 1982ರ ಜುಲೈ 1ರಿಂದ ಪೂರ್ಣ ಪ್ರಮಾಣದಲ್ಲಿ ತನ್ನ ಕೆಲಸ ಆರಂಭಿಸುವ ನಿರೀಕ್ಷೆ ಇದೆಯೆಂದು ಕೇಂದ್ರ ಹಣಕಾಸು ಸಚಿವರು ಹೇಳಿದ್ದಾರೆ. ಕೃಷಿ ಹಾಗೂ ತತ್ಸಂಬಂಧಿ ಚಟುವಟಿಕೆಗಳಿಗೆ ಹಣ ಒದಗಿಸುವುದರೊಂದಿಗೆ ಸಂಪೂರ್ಣ ಗ್ರಾಮೀಣ ಸಾಲ ವ್ಯವಸ್ಥೆಯ ಮೇಲ್ವಿಚಾರಣೆಯನ್ನು ನಬಾರ್ಡ್ ಮಾಡುವುದೆಂದು ಅವರು ಹೇಳಿದರು.

## ಸಣ್ಣ, ಮಧ್ಯಮ ಪ್ರತಿಕೆಗಳಿಗೆ ಬ್ಯಾಂಕ್ ನೆರವು

ಸಣ್ಣ ಸಾಲಗಳ (ಸಣ್ಣ ಕೈಗಾರಿಕೆಗಳು) ಖಾತರಿ ಯೋಜನೆಯನ್ವಯ ಠೇವಣಿ ವಿಮೆ ಮತ್ತು ಉದರಿ ಖಾತೆ ನಿಗಮ ನೀಡುವ ಖಾತರಿ ರಕ್ಷಣೆಯನ್ನು ಹೊಂದಲು ಸಣ್ಣ ಮತ್ತು ಮಧ್ಯಮ ವೃತ್ತಪತ್ರಿಕೆಗಳಿಗೆ ನೀಡಲಾದ ಮುಂಗಡಗಳೂ ಅರ್ಹವಾಗಿವೆ. ಮುಂಗಡಗಳು ಖಾತರಿ ಯೋಜನೆಯಲ್ಲಿಯ ನಿಯಮಗಳಿಗೂ ಷರತ್ತುಗಳಿಗೂ ಒಳಪಟ್ಟಿದ್ದರೆ, ಹಾಗೂ ಭಾರತ ಸರಕಾರ ಸಣ್ಣ ಕೈಗಾರಿಕೆ ಎಂಬ ಬಗ್ಗೆ ನಿಗದಿಪಡಿಸಿರುವ ವಿವರಣೆಗೆ ಸದರಿ ಸಂಸ್ಥೆಗಳು ಹೊಂದುವಂತಿದ್ದರೆ ಮಾತ್ರ ಸವಲತ್ತು ಲಭ್ಯ.

## ಸ್ವೋದ್ಯೋಗಕ್ಕಾಗಿ ಗ್ರಾಮೀಣ ಯುವಕರ ತರಬೇತಿ ಯೋಜನೆಯಲ್ಲಿ ಬ್ಯಾಂಕ್

ಸ್ವೋದ್ಯೋಗಕ್ಕಾಗಿ ಗ್ರಾಮೀಣ ಯುವಕರ ರಾಷ್ಟ್ರೀಯ ತರಬೇತಿ ಯೋಜನೆಯಲ್ಲಿ ವಾಣಿಜ್ಯ, ಪ್ರಾದೇಶಿಕ ಗ್ರಾಮೀಣ ಹಾಗೂ ಸಹಕಾರಿ ಬ್ಯಾಂಕುಗಳ ಶಾಖಾ ವ್ಯವಸ್ಥಾಪಕರು ನಿಕಟವಾಗಿ ತೊಡಗಬೇಕೆಂದು ತಿಳಿಸಲಾಗಿದೆ. ಉದ್ದೇಶಿತ ಸಮೂಹಗಳಿಂದ ಸೂಕ್ತ ಪ್ರಕಾರದ ಉದ್ಯೋಗ ತರಬೇತಿಗಾಗಿ ಅಭ್ಯರ್ಥಿಗಳ ಆಯ್ಕೆ, ಬ್ಯಾಂಕ್ ನೆರವಿಗೆ ಅರ್ಹವಾಗಬಲ್ಲ ಯೋಜನಾ ವರದಿ ತಯಾರಿಕೆ, ಈ ಎಲ್ಲ ಹಂತಗಳಲ್ಲಿ ಅವರು ನಿಕಟವರ್ತಿಗಳಾಗಿರಬೇಕೆಂದು ರಿಜರ್ವ್ ಬ್ಯಾಂಕ್ ಎಲ್ಲ ಬ್ಯಾಂಕ್‌ಗಳ ಅಧ್ಯಕ್ಷರಿಗೆ ಬರೆದ ಪತ್ರದಲ್ಲಿ ತಿಳಿಸಿದೆ.

---

(ಪುಟ ೨೬ರಿಂದ)

ಬೇರೆ ಗ್ರಾಹಕರು ಅವರ ಆಕ್ಷೇಪಣೆಗಳಿಗೆ ಸೊಪ್ಪು ಹಾಕದ ಹಾಗೆ ನೋಡಿಕೊಂಡರೆ ಸಾಕು ನಮಗೆ.

ಬ್ಯಾಂಕಿನ ಶಾಖೆ ಪ್ರಾರಂಭ ಮಾಡುವುದಕ್ಕೆ ಸ್ವಲ್ಪ ಕಷ್ಟ. ಆದರೆ ವಿಸ್ತರಣ ಕೇಂದ್ರ ತೆಗೆಯಲು ರಿಸರ್ವ್ ಬ್ಯಾಂಕ್ ಒಪ್ಪಿಗೆ ನೀಡುತ್ತದೆ ಎಂದು ಬ್ಯಾಂಕ್‌ಗಳು ಮೊದಲು ತಮ್ಮ ವಿಸ್ತರಣ ಕೇಂದ್ರಗಳನ್ನು ತೆರೆಯುತ್ತವೆ. ಕ್ರಮೇಣ ಅವನ್ನು ಶಾಖೆಗಳಾಗಿ ಪರಿವರ್ತಿಸುವ ಉದ್ದೇಶ ಎಲ್ಲ ಬ್ಯಾಂಕುಗಳಿಗೂ ಇರುತ್ತದೆ. ರಿಸರ್ವ್ ಬ್ಯಾಂಕನ್ನು ಸುಲಭವಾಗಿ ಪರಿವರ್ತನೆಗೆ ಒಪ್ಪಿಸಬಹುದು. ಈ ಉಪಾಯದ ಹಿನ್ನೆಲೆ ಏನೇ ಇರಲಿ, ಒಂದು ವಿಸ್ತರಣ ಕೇಂದ್ರ ಹೆಚ್ಚು ಬೆಳೆಯಬೇಕಾದರೆ ಬ್ಯಾಂಕ್–ಗ್ರಾಹಕ ಸಂಬಂಧ, ಗ್ರಾಹಕ ಸೇವೆ ಬಹಳ ಮುಖ್ಯವಾಗುತ್ತವೆ.

# ಭಾರತದಲ್ಲಿ ಸೂಚಿತ ವಿನಿಮಯ ದರಗಳನ್ನು ನಿರ್ಧರಿಸುವ ತತ್ತ್ವಗಳು

**ಪಿ. ಪಿ. ಆರ್. ಉಪಾಧ್ಯಾಯ**

ಭಾರತದಲ್ಲಿ ವಿದೇಶಿ ವಿನಿಮಯ ವಹಿವಾಟುಗಳು ವಿದೇಶಿ ವಿನಿಮಯ ನಿಯಂತ್ರಣ ಅಧಿನಿಯಮದ ನಿಯಮಗಳಿಗೂ ಭಾರತೀಯ ರಿಸರ್ವ್ ಬ್ಯಾಂಕಿನ ವಿನಿಮಯ ನಿಯಂತ್ರಣ ಇಲಾಖೆಯವರು ಕಾಲಕಾಲಕ್ಕೆ ನೀಡುವ ನಿಬಂಧನೆಗಳಿಗೂ ಒಳಪಡುತ್ತವೆ. ರಿಸರ್ವ್ ಬ್ಯಾಂಕಿನಿಂದ ಪರವಾನಗಿ ಪಡೆದ ಬ್ಯಾಂಕುಗಳು ವಿದೇಶಿ ವಿನಿಮಯ ವಹಿವಾಟುಗಳನ್ನು ನಡೆಸುತ್ತವೆ. ಎಲ್ಲ ಅಧಿಕೃತ ವ್ಯಾಪಾರಿಗಳೂ (ಪರವಾನಗಿ ಪಡೆದ ಬ್ಯಾಂಕುಗಳೂ ಸೇರಿದಂತೆ) ಭಾರತದ ವಿದೇಶಿ ವಿನಿಮಯ ವ್ಯಾಪಾರಿಗಳ ಸಂಘದ ಸದಸ್ಯರು. ಈ ಸಂಘ ಭಾರತದಲ್ಲಿ ವಿದೇಶಿ ವಿನಿಮಯ ವ್ಯವಹಾರವನ್ನು ನಡೆಸಲು ಮತ್ತು ನಿಯಂತ್ರಿಸಲು ಹಾಗೂ ತನ್ನ ಸದಸ್ಯರಿಗೆ ಯುಕ್ತ ಮಾರ್ಗದರ್ಶನ ನೀಡಲು 1958ರಲ್ಲಿ ಅಸ್ತಿತ್ವಕ್ಕೆ ಬಂತು. ಇದರ ಮುಖ್ಯ ಕಾರ್ಯಗಳು ಎರಡು:

1 ಪೌಂಡ್ ಸ್ಟರ್ಲಿಂಗ್ ಬಗ್ಗೆ ವಿನಿಮಯ ದರಗಳ ಪಟ್ಟಿಯನ್ನು, ಭಾರತೀಯ ರಿಸರ್ವ್ ಬ್ಯಾಂಕಿನೊಡನೆ ಸಮಾಲೋಚಿಸಿ, ಕಾಲಕಾಲಕ್ಕೆ ನೀಡುವುದು;

2 ಈ ಮುಂದಿನವುಗಳ ಬಗ್ಗೆ ಮಾರ್ಗದರ್ಶನಗಳನ್ನು ನೀಡುವುದು:

- i ಸ್ಟರ್ಲಿಂಗೇತರ ಕರೆನ್ಸಿಗಳ ದರ ನಿಷ್ಕರ್ಷೆ,
- ii ಬ್ಯಾಂಕು ಮತ್ತು ದಳ್ಳಾಳಿಗಳ ವ್ಯವಹಾರ,
- iii ವಾಯಿದಾ ಕರಾರುಗಳ ಗೊತ್ತುಪಾಡು (ಬುಕಿಂಗ್) ಮತ್ತು ಅವುಗಳ ವಿಸ್ತರಣೆ ಹಾಗು ರದ್ದು;
- iv ನಾನಾ ಬಗೆಯ ವಿದೇಶಿ ವಿನಿಮಯ ವಹಿವಾಟುಗಳಿಗೆ ವಿಧಿಸುವ ಶುಲ್ಕಗಳು.

ಭಾರತೀಯ ರಿಸರ್ವ್ ಬ್ಯಾಂಕು ಪೌಂಡ್ ಸ್ಟರ್ಲಿಂಗನ್ನು ಅಮಿತ ಪ್ರಮಾಣದಲ್ಲಿ ಅಧಿಕೃತ ವ್ಯಾಪಾರಿಗಳಿಂದ ಕೊಳ್ಳಲು, ಅವರಿಗೆ ಮಾರಲು ಸದಾ ಸಿದ್ಧವಿರುತ್ತದೆ. 1966ರ ಜೂನ್ 6ರ ವರೆಗೆ (ರೂಪಾಯಿ ಅಪಮೌಲ್ಯವಾದ ದಿನ) ರಿಸರ್ವ್ ಬ್ಯಾಂಕು ಅಧಿಕೃತ ವ್ಯಾಪಾರಿಗಳಿಂದ ತತ್‌ಕ್ಷಣ ಮತ್ತು ವಾಯಿದಾ ವ್ಯವಹಾರಗಳ ಬಗ್ಗೆ ಮಾರಾಟ ಮತ್ತು ಕೊಳ್ಳಿಕೆ ಮಾಡುತ್ತಿತ್ತು. ಆದರೆ 6–6–1966ರಿಂದ ಈಚೆಗೆ ರಿಸರ್ವ್ ಬ್ಯಾಂಕು ವಾಯಿದಾ ಕೊಳ್ಳಿಕೆಯನ್ನು (ಬೈಯಿಂಗ್ ಫಾರ್ವರ್ಡ್) ಮಾತ್ರ ಮಾಡುತ್ತಿದ್ದು ವಾಯಿದಾ ಮಾರಾಟವನ್ನು (ಸೆಲ್ಲಿಂಗ್ ಫಾರ್ವರ್ಡ್) ನಿಲ್ಲಿಸಿದೆ.

ಭಾರತದ ವಿದೇಶಿ ವಿನಿಮಯ ಮಾರುಕಟ್ಟೆಯಲ್ಲಿ ಮೂರು ಹಂತಗಳಿವೆ. ಆಮದು ರಫ್ತು ಗ್ರಾಹಕರೂ, ವಿದೇಶಿ ವಿನಿಮಯ ಮಾರಾಟ ಕೊಳ್ಳಿಕೆಗಳ ವ್ಯವಹಾರದಲ್ಲಿ ತೊಡಗಿರುವ ಇತರರೂ ಈ ಮಾರುಕಟ್ಟೆಯ ಅಡಿಪಾಯ. ತಮ್ಮ ಗ್ರಾಹಕರಿಂದ ಕೊಳ್ಳುವ ಮತ್ತು ಮಾರುವ ವ್ಯವಹಾರ ನಡೆಸುವ ಬ್ಯಾಂಕುಗಳು ರಿಸರ್ವ್ ಬ್ಯಾಂಕಿನೊಂದಿಗೆ ಈ ಅಡಿಪಾಯದ ಮೇಲೆ ಭವ್ಯ ರಚನೆ ನಿರ್ಮಿಸಿವೆ ಕಡಲಾಚೆಯ ಪ್ರತಿನಿಧಿಗಳು ಈ ರಚನೆಯ ಕಳಶ.

ಅಧಿಕೃತ ವ್ಯಾಪಾರಿಗಳಿಂದ ಪೌಂಡ್ ಸ್ಟರ್ಲಿಂಗನ್ನು ಕೊಳ್ಳುವ ಮತ್ತು ಮಾರುವ ದರಗಳನ್ನು ರಿಸರ್ವ್ ಬ್ಯಾಂಕು ಕಾಲಕಾಲಕ್ಕೆಪ್ರಕಟಿಸುತ್ತದೆ. ರಿಸರ್ವ್ ಬ್ಯಾಂಕಿನ ಪ್ರಕಟಣೆಯ ಅನಂತರ ವಿದೇಶಿ ವಿನಿಮಯ ವ್ಯಾಪಾರಿಗಳ ಸಂಘ ವಣಿಕ ವಹಿವಾಟುಗಳಿಗೆ ಅನ್ವಯವಾಗುವ ದರಗಳನ್ನು ನಿಷ್ಕರ್ಷಿಸಿ ಪೌಂಡ್ ಸ್ಟರ್ಲಿಂಗ್ ದರ ಪಟ್ಟಿಯನ್ನು ತನ್ನ ಸದಸ್ಯ ಬ್ಯಾಂಕುಗಳಿಗೆ ನೀಡುತ್ತದೆ. ಆದುದರಿಂದ ಯಾವುದೇ ಒಂದು ದಿನ ಪೌಂಡ್ ಸ್ಟರ್ಲಿಂಗಿನ ವಿನಿಮಯ ದರ ಎಲ್ಲ ಬ್ಯಾಂಕುಗಳಲ್ಲಿ ಏಕರೀತಿಯದಾಗಿರುತ್ತದೆ ಮತ್ತು ದರದಲ್ಲಿ ಹೆಚ್ಚು ಕಡಿಮೆ ಮಾಡುವ ಅವಕಾಶ ಇರುವುದಿಲ್ಲ. ಅಂದರೆ ತಮ್ಮ ಗ್ರಾಹಕರಿಗೆ ಉತ್ತಮತರ ದರವನ್ನು (ಫೈನರ್ ರೇಟ್) ಯಾವುದೇ ಬ್ಯಾಂಕು ಕೊಡಲಾಗುವುದಿಲ್ಲ.

ಪೌಂಡ್ ಸ್ಟರ್ಲಿಂಗಿನ ತತ್‌ಕ್ಷಣದ ಮತ್ತು ವಾಯಿದಾ ವಹಿವಾಟುಗಳಿಗೆ ಸಂಬಂಧಿಸಿದ್ದನ್ನು ರಿಸರ್ವ್ ಬ್ಯಾಂಕು ಅಧಿಕೃತ ವ್ಯಾಪಾರಿಗಳಿಂದ ಕೊಂಡರೆ, ಅಮೆರಿಕದ ಡಾಲರ್, ಪಶ್ಚಿಮ ಜರ್ಮನಿಯ ಮಾರ್ಕ್, ಜಪಾನಿನ ಯೆನ್ ಇತ್ಯಾದಿಗಳನ್ನು ಪೌರಸ್ತ್ಯ ಮಾರುಕಟ್ಟೆಗಳಲ್ಲಿ ದೊರೆಯುವ ಸೂಚಿತ

ದರಗಳ (ಕೊಟೇಷನ್) ಆಧಾರದ ಮೇಲೆ ಕೊಳ್ಳುತ್ತದೆ. ಆದರೆ ಈ ಕರೆನ್ಸಿಗಳನ್ನು ಅಧಿಕೃತ ವ್ಯಾಪಾರಿಗಳಿಗೆ ಮಾರುವುದಿಲ್ಲ.

ಸಿಂಗಪುರ, ಹಾಂಗ್‌ಕಾಂಗ್, ಪಶ್ಚಿಮ ಏಷ್ಯ, ಲಂಡನ್ ಮೊದಲಾದ ಮಾರುಕಟ್ಟೆಗಳಲ್ಲಿ ದೊರೆಯುವ ಸೂಚಿತ ದರಗಳ ಆಧಾರದಿಂದ ಅಧಿಕೃತ ವ್ಯಾಪಾರಿಗಳು ತಮ್ಮಲ್ಲಿರುವ ಕರೆನ್ಸಿಗಳನ್ನು ಅಥವಾ ಬೇಕಾದ ಕರೆನ್ಸಿಗಳನ್ನು ತಮ್ಮ ಪ್ರತಿನಿಧಿಗಳಿಗೆ ಮಾರುತ್ತಾರೆ ಅಥವಾ ಕೊಳ್ಳುತ್ತಾರೆ. ರಿಸರ್ವ್ ಬ್ಯಾಂಕಿಗೆ ಅಮಿತ ಪರಿಮಾಣದಲ್ಲಿ ಪೌಂಡ್ ಸ್ಟರ್ಲಿಂಗುಗಳನ್ನು ಮಾರುವ ಅಥವಾ ಅದರಿಂದ ಕೊಳ್ಳುವ ಮೂಲಕ ಮೇಲ್ಕಂಡ ವಹಿವಾಟುಗಳನ್ನು ಇತ್ಯರ್ಥ ಮಾಡಿಕೊಳ್ಳುತ್ತಾರೆ.

ಉದಾಹರಣೆಗೆ ಒಂದು ಭಾರತೀಯ ಬ್ಯಾಂಕು 1 ಕೋಟಿ ಅಮೆರಿಕನ್ ಡಾಲರುಗಳನ್ನು ಸಿಂಗಪುರದಲ್ಲಿ ಕೊಳ್ಳಬೇಕಾಗಿದೆ ಎಂದು ತಿಳಿಯೋಣ. ಅದು ಮಾರುಕಟ್ಟೆ ವ್ಯವಹಾರಗಳಲ್ಲಿ ಅತ್ಯುತ್ತಮವಾದುದೆಂದು ಇಟ್ಟುಕೊಳ್ಳೋಣ. ದೊರೆಯುವ ಸೂಚಿತ ದರಗಳ ಆಧಾರದಮೇಲೆ ಡಾಲರನ್ನು ಕೊಳ್ಳುತ್ತದೆ. ಇದಕ್ಕಾಗಿ ಆ ಬ್ಯಾಂಕು ಅಷ್ಟೇ ಬೆಲೆಯ ಪೌಂಡ್ ಸ್ಟರ್ಲಿಂಗ್ ಮೊಬಲಗನ್ನು, ಅದಕ್ಕೆ ಸಮನಾದ ರೂಪಾಯಿ ನಿಧಿಗಳನ್ನು ರಿಜರ್ವ್ ಬ್ಯಾಂಕಿಗೆ ನೀಡಿ, ಪಡೆಯುತ್ತದೆ. ಆದುದರಿಂದ ಪಾವತಿ ಪಟ (ಪೇಮೆಂಟ್ ಚಾರ್ಟ್) ಈ ರೀತಿ ಇರುತ್ತದೆ:

ಭಾರತೀಯ ಬ್ಯಾಂಕು
ರೂಪಾಯಿಗಳನ್ನು
ರಿಸರ್ವ್ ಬ್ಯಾಂಕಿಗೆ
ಪಾವತಿ ಮಾಡುತ್ತದೆ

↓

ರಿಸರ್ವ್ ಬ್ಯಾಂಕು
ಸುಮಾರು ರೂ. 48.48 ಲಕ್ಷ
ರವಾನಿಸುತ್ತದೆ

↓

ಲಂಡನ್ನಿನ ಮರ್ಕೆಂಟೈಲ್
ಬ್ಯಾಂಕಿನಲ್ಲಿರುವ
ಹಾಂಗ್‌ಕಾಂಗ್ ಮತ್ತು ಷಾಂಗೈ
ಬ್ಯಾಂಕಿಂಗ್ ನಿಗಮದ ಖಾತೆಯ ಜಮೆಗಾಗಿ

↓

ಸಿಂಗಪುರದ ಹಾಂಗ್‌ಕಾಂಗ್ ಮತ್ತು
ಷಾಂಗೈ ಬ್ಯಾಂಕಿಂಗ್ ನಿಗಮ
1 ಕೋಟಿ ಅಮೆರಿಕನ್ ಡಾಲರ್
ರವಾನಿಸುತ್ತದೆ

↓

ಚೇಸ್ ಮನ್ಹಟನ್ ಬ್ಯಾಂಕಿನಲ್ಲಿರುವ
ಭಾರತೀಯ ಬ್ಯಾಂಕಿನ ಖಾತೆಯ ಜಮೆಗಾಗಿ.

5,00,00 ಅಮೆರಿಕನ್ ಡಾಲರುಗಳಿಗಿಂತ ಕಡಿಮೆ ಮೊತ್ತವನ್ನು ಭಾರತೀಯ ಬ್ಯಾಂಕುಗಳಿಂದ ಕೊಳ್ಳಲು ಅಥವಾ ಅವಕ್ಕೆ ಮಾರಲು ವಿದೇಶಿ ಬ್ಯಾಂಕುಗಳು ಸಾಮಾನ್ಯವಾಗಿ ಇಷ್ಟಪಡುವುದಿಲ್ಲ. ಇಂಥ ಸಂದರ್ಭದಲ್ಲಿ ಬ್ಯಾಂಕುಗಳು ಎಲ್ಲ ಅಧಿಕೃತ ಬ್ಯಾಂಕುಗಳನ್ನೊಳಗೊಂಡ ಅಂತರ ಬ್ಯಾಂಕ್ ಮಾರುಕಟ್ಟೆಯಲ್ಲಿ ತಮಗೆ ಬೇಕಾದ ಕರೆನ್ಸಿಗಳನ್ನು ಕೊಳ್ಳುವ ಮತ್ತು ತಮಗೆ ಬೇಡದ ಕರೆನ್ಸಿಗಳನ್ನು ಮಾರುವ ವ್ಯವಹಾರವನ್ನು ನಡೆಸುತ್ತವೆ. ಅಂತರ ಬ್ಯಾಂಕು ಮಾರುಕಟ್ಟೆಯಲ್ಲಿ ರೂಪಾಯಿ ಅಥವಾ ತಮಗೆ ಬೇಕಾದ ಕರೆನ್ಸಿಯಲ್ಲಿ, ತಮ್ಮ ಆವಶ್ಯಕತೆಗನುಸಾರವಾಗಿ ಬ್ಯಾಂಕುಗಳು ವಹಿವಾಟು ನಡೆಸುತ್ತವೆ. ಈ ಮಾರುಕಟ್ಟೆಯ ವ್ಯವಹಾರಗಳು ವಿನಿಮಯ ದಳ್ಳಾಳಿ (ಎಕ್ಸ್‌ಚೇಂಜ್ ಬ್ರೋಕರ್) ಮೂಲಕ ನಡೆಯುತ್ತವೆ. ಭಾರತದಲ್ಲಿ ಎಲ್ಲೆಲ್ಲಿ ವಿನಿಮಯ ದಳ್ಳಾಳಿಗಳು ಕಾರ್ಯ ಮಾಡುವರೋ ಅಲ್ಲೆಲ್ಲಾ ಬ್ಯಾಂಕುಗಳು ತಮ್ಮತಮ್ಮಲ್ಲೇ ನೇರವಾಗಿ ವಿನಿಮಯ ಕಲಾಪಗಳನ್ನು ಇತ್ಯರ್ಥ ಮಾಡಿಕೊಳ್ಳಲು ಅವಕಾಶವಿಲ್ಲ. ಭಾರತದಲ್ಲಿರುವ ಮತ್ತು ವಿದೇಶಗಳಲ್ಲಿರುವ ವಿದೇಶಿ ವಿನಿಮಯ ಮಾರುಕಟ್ಟೆಗಳ ನಿಕಟ ಸಂಬಂಧ ಈ ದಳ್ಳಾಳಿಗಳಿಗಿರುವುದರಿಂದ ಬ್ಯಾಂಕುಗಳು ತಮ್ಮಲ್ಲಿರುವ ವಿದೇಶಿ ಕರೆನ್ಸಿಗಳನ್ನು ಮಾರಲು ಅಥವಾ ತಮಗೆ ಬೇಕಾದ ಕರೆನ್ಸಿಗಳನ್ನು ಕೊಳ್ಳಲು ಅನುಕೂಲವಾದ ಪ್ರಚಲಿತ ದರಗಳ (ಗೋಯಿಂಗ್ ರೇಟ್) ಬಗ್ಗೆ ಸಲಹೆ ನೀಡುವಂಥ ಉನ್ನತ ಸ್ಥಾನದಲ್ಲಿ ಇವರು ಇರುತ್ತಾರೆ.

ತಮ್ಮ ಗ್ರಾಹಕರೊಡನೆ ನಡೆಸುವ ಎಲ್ಲ ಕರೆನ್ಸಿ ವಹಿವಾಟುಗಳಿಗೂ ಅಗತ್ಯವಾಗುವಷ್ಟು ಕರೆನ್ಸಿ ಸ್ಥಿತಿಯನ್ನು (ಕರೆನ್ಸಿ ಪೊಸಿಷನ್) ಬ್ಯಾಂಕುಗಳು ಹೊಂದಿರುತ್ತವೆ. ನಿಗದಿಯಾದ ಕಾಲದಲ್ಲಿ ಒಂದು ಬ್ಯಾಂಕು ತನ್ನ ಗ್ರಾಹಕನೊಂದಿಗೆ ನಿರ್ದಿಷ್ಟ ಕರೆನ್ಸಿಯಲ್ಲಿ ನಡೆಸಿದ ಒಟ್ಟು ಮಾರಾಟ ಮತ್ತು ಕೊಳ್ಳಿಕೆಗಳ ವ್ಯತ್ಯಾಸವೇ ಆ ಕರೆನ್ಸಿಯ ಸ್ಥಿತಿಯಾಗಿರುತ್ತದೆ. ಕರೆನ್ಸಿ ಸ್ಥಿತಿಯನ್ನು ತಿಳಿಯಲು ತತ್‌ಕ್ಷಣ ಮತ್ತು ವಾಯಿದಾ ವಹಿವಾಟುಗಳಲ್ಲಿಯ ಮಾರಾಟ ಮತ್ತು ಕೊಳ್ಳಿಕೆಗಳು ಏಕರೀತಿಯವೆಂದು ಭಾವಿಸಲಾಗುವುದು. ಉದಾಹರಣೆಗೆ ನಿರ್ದಿಷ್ಟ ಕಾಲದಲ್ಲಿ ಪೌಂಡ್ ಸ್ಟರ್ಲಿಂಗಿನ ಕರೆನ್ಸಿ ಸ್ಥಿತಿ ಅತಿರಿಕ್ತ ಕೊಳ್ಳಿಕೆಯ (ಓವರ್ ಬಾಟ್) [ಒಟ್ಟು ಮಾರಾಟಕ್ಕಿಂತ ಒಟ್ಟು ಕೊಳ್ಳಿಕೆ ಹೆಚ್ಚಾಗಿರುವುದು.] ಅಥವಾ ಅತಿರಿಕ್ತ ಮಾರಾಟದ (ಓವರ್ ಸೋಲ್ಡ್) [ಒಟ್ಟು ಕೊಳ್ಳುವಿಕೆಗಿಂತ ಒಟ್ಟು ಮಾರಾಟ ಅಧಿಕವಾಗಿರುವುದು] ಸ್ಥಿತಿಯಾಗಿರಬಹುದು.

ಒಂದು ಬ್ಯಾಂಕು ತನ್ನಲ್ಲಿರುವ ಯಾವುದೇ ಕರೆನ್ಸಿಯನ್ನು ಕುರಿತ ಕರೆನ್ಸಿ ಸ್ಥಿತಿಗೆ ಅನುಗುಣವಾಗಿ, ತನ್ನ ಗ್ರಾಹಕರು ನೀಡುವ ವಣಿಕ ವಹಿವಾಟುಗಳನ್ನು (ಮರ್ಚೆಂಟ್ ಟ್ರಾನ್ಸಾಕ್ಷನ್ಸ್) ಕೈಗೊಳ್ಳುತ್ತದೆ ಮತ್ತು ಉತ್ತಮ ದರಗಳನ್ನು ಕೊಡಲು ಸಾಧ್ಯವಾಗುತ್ತದೆ. ನಿದರ್ಶನದ ಮೂಲಕ ಹೇಳು

ವುದಾದರೆ, ಒಂದು ಬ್ಯಾಂಕಿನಲ್ಲಿ ಅಮೆರಿಕನ್ ಡಾಲರಿಗೆ ಸಂಬಂಧಿಸಿದಂತೆ 5,000 ಡಾಲರುಗಳ ಅತಿರಿಕ್ತ ಕೊಳ್ಳುವಿಕೆ ಸ್ಥಿತಿ ಇದೆ ಎಂದು ಭಾವಿಸೋಣ. ಆ ಬ್ಯಾಂಕು ಅಂತರಬ್ಯಾಂಕು ಮಾರುಕಟ್ಟೆಗೆ ಹೋಗದೆ ತನ್ನ ಗ್ರಾಹಕ ನೀಡುವ 4,000 ಅಮೆರಿಕನ್ ಡಾಲರ್ ವರೆಗಿನ ವಹಿವಾಟನ್ನು ಕೈಗೊಳ್ಳಬಹುದು. ಈ ವಹಿವಾಟಿನ ಅನಂತರ ಕರೆನ್ಸಿ ಸ್ಥಿತಿ ಅಮೆರಿಕನ್ ಡಾಲರ್ 1,000 ಆಗುತ್ತದೆ.

ಹೆಚ್ಚು ಮೊಬಲಗಿನ ವಹಿವಾಟುಗಳನ್ನು ಕೈಗೊಳ್ಳಬೇಕಾದರೆ ಬ್ಯಾಂಕುಗಳು ವಿದೇಶಿ ವಿನಿಮಯ ಮಾರುಕಟ್ಟೆಗಳಿಗೆ ಶರಣು ಹೋಗಬೇಕಾಗುತ್ತದೆ. ಉದಾಹರಣೆಗೆ ಒಂದು ಕಂಪನಿ 10,00,000 ಅಮೆರಿಕನ್ ಡಾಲರ್ ಮೊಬಲಗನ್ನು ರವಾನಿಸಬೇಕೆಂದು ತಿಳಿಯೋಣ. ಆಗ ಆ ಕಂಪನಿಯ ಬ್ಯಾಂಕರ್ ಮೊದಲು ಅಂತರಬ್ಯಾಂಕು ಮಾರುಕಟ್ಟೆಯಿಂದಾಗಲಿ ಕಡಲಾಚೆಯ ಮಾರುಕಟ್ಟೆಯಿಂದಾಗಲಿ 10,00,000 ಅಮೆರಿಕನ್ ಡಾಲರುಗಳನ್ನು ಕೊಂಡು ಅನಂತರ ತನ್ನ ಗ್ರಾಹಕನಿಗೆ ಅದನ್ನು ಮಾರುತ್ತಾನೆ. ಇದರಿಂದ ಎರಡು ಪ್ರಯೋಜನಗಳುಂಟು:

1 ಕಂಪನಿಗೆ ಮಾರಿದ ವಿನಿಮಯದಿಂದ ಮುಂದೆ ತನ್ನ ವಿದೇಶಿ ಖಾತೆಯಲ್ಲಿ ಉಂಟಾಗುವ ಋಣಕ್ಕೆ (ಡೆಬಿಟ್) ಮೊದಲೇ ನಿಧಿಗಳನ್ನು ಹೊಂದಿಸಿದಂತಾಗುತ್ತದೆ.

2 ತಾನು ಹಣವನ್ನು ಪಡೆಯಲು ತೆತ್ತ ದರ ಬ್ಯಾಂಕಿಗೆ ತಿಳಿದಿರುವುದರಿಂದ ಅದು ತನ್ನ ಗ್ರಾಹಕನಿಗೆ ದರಗಳನ್ನು ನೀಡುವಾಗ ತನ್ನ ಲಾಭವನ್ನು ಸೇರಿಸಿ ನೀಡಬಹುದು.

ಈ ಎಲ್ಲ ಕ್ರಿಯೆ ನಡೆಯುವಾಗ ನಾವು ಗಮನಿಸಬೇಕಾದ ಅಂಶವೇನೆಂದರೆ. ಬ್ಯಾಂಕಿನ ಅಮೆರಿಕನ್ ಡಾಲರಿನ ಕರೆನ್ಸಿ ಸ್ಥಿತಿ ಬದಲಾಗದೆ ಉಳಿದಿರುವುದು. ಅಲ್ಲದೆ ಅತಿರಿಕ್ತ ಕೊಳ್ಳಿಕೆ ಮತ್ತು ಅತಿರಿಕ್ತ ಮಾರಾಟ ಸ್ಥಿತಿ ಬ್ಯಾಂಕನ್ನು ವಿನಿಮಯ ಏರಿಳಿತಗಳ ಅಪಾಯ ಸ್ಥಿತಿಗೆ ಪಕ್ಕಾಗುವಂತೆ ಮಾಡುತ್ತದೆ. ಅತಿರಿಕ್ತ ಕೊಳ್ಳಿಕೆ ಸ್ಥಿತಿ ಎಂದರೆ ವಿದೇಶದಲ್ಲಿ ಅತಿರಿಕ್ತ ಸಿಲ್ಕನ್ನು ಹೊಂದಿರುವುದು. ಇದರಿಂದ ಎರಡು ಅಪಾಯಗಳುಂಟು. ಬ್ಯಾಂಕಿನ ರೂಪಾಯಿ ಸಂಪನ್ಮೂಲಗಳು ವಿದೇಶದಲ್ಲಿರುವ ಅತಿರಿಕ್ತ ಸಿಲ್ಕಿನಷ್ಟು ಕುಂದುತ್ತದೆ. ಮತ್ತು ಅಮೆರಿಕನ್ ಡಾಲರಿನ ಬೆಲೆ ಕುಸಿದಾಗ, ಮಾರುವ ಬೆಲೆ ಮತ್ತು ಕೊಳ್ಳುವ ಬೆಲೆಗಳ ನಡುವಣ ವ್ಯತ್ಯಾಸದಿಂದಾಗಿ ನಷ್ಟವನ್ನನುಭವಿಸಬೇಕಾಗುತ್ತದೆ. ವಿನಿಮಯ ದರಗಳಲ್ಲಾಗುವ ಏರಿಳಿತಗಳಿಂದುಂಟಾಗುವ ನಷ್ಟವನ್ನು ತಡೆಗಟ್ಟಲು ಬ್ಯಾಂಕುಗಳು ಒಂದೊಂದು ಕರೆನ್ಸಿಯಲ್ಲೂ ಕೊಳ್ಳಿಕೆಗೆ ತಕ್ಕ ಮಾರಾಟವಿರುವ ಸಮಸ್ಥಿತಿಯಲ್ಲಿ (ಸ್ಕ್ವೇರ್ ಪೊಸಿಷನ್) ಕಲಾಪ ನಡೆಸುತ್ತದೆ.

ವಿನಿಮಯ ದರವನ್ನು ರೂ 100ಕ್ಕೆ ಇಷ್ಟು ವಿದೇಶಿ ಕರೆನ್ಸಿ ಏಕಮಾನಗಳೆಂದು ಅಭಿವ್ಯಕ್ತಿಸಲಾಗುವುದು. ಬ್ಯಾಂಕುಗಳು ವಿದೇಶಿ ಕರೆನ್ಸಿಗಳನ್ನು ಯಾವ ದರದಲ್ಲಿ ಕೊಳ್ಳುತ್ತವೆಯೋ ಮಾರುತ್ತವೆಯೋ ಅವನ್ನು ಕೊಳ್ಳುವ ದರ ಮತ್ತು ಮಾರುವ ದರಗಳೆಂದು ಕರೆಯಲಾಗುವುದು.

"ಹೆಚ್ಚು ಕೊಟ್ಟು ಕೊಳ್ಳು, ಕಡಿಮೆಗೆ ಮಾರು" ಎಂಬ ಸಾರ್ವತ್ರಿಕ ತತ್ತ್ವದಂತೆ (ಮ್ಯಾಕ್ಸಿಮ್) ಕೊಳ್ಳುವ ದರಗಳು ಯಾವಾಗಲೂ ಹೆಚ್ಚಿದ್ದು ಮಾರುವ ದರಗಳು ಕಡಿಮೆಯಿರುತ್ತವೆ. ಬ್ಯಾಂಕುಗಳು ತಮ್ಮ ಗ್ರಾಹಕರಿಗೆ, ಪೌರಸ್ತ್ಯ ಮಾರುಕಟ್ಟೆಗಳಿಗೆ ಅಥವಾ ಆ ಸಮಯದಲ್ಲಿ ಜಾರಿಯಲ್ಲಿದ್ದ ಮಾರುಕಟ್ಟೆಗಳಿಗೆ, ಮಾರುಕಟ್ಟೆಯ ಸೂಚಿತ ದರಗಳ (ಕೊಟೇಷನ್) ಆಧಾರದ ಮೇಲೆ ದರ ಹೇಳುತ್ತವೆ. ಮತ್ತು ಸ್ಟರ್ಲಿಂಗ್–ರೂಪಾಯಿ ಅಡ್ಡ ದರವನ್ನು (ಕ್ರಾಸ್ ರೇಟ್) ಬಳಸುತ್ತವೆ. ಭಾರತದ ವಿದೇಶಿ ವಿನಿಮಯ ವ್ಯಾಪಾರಿಗಳ ಸಂಘದ ಮಾರ್ಗದರ್ಶನದಂತೆ ದರವನ್ನು ಪೂರ್ಣಾಂಕದಲ್ಲಿ ನೀಡಲಾಗುವುದು.

ಮೇಲೆ ಹೇಳಿದ ತತ್ತ್ವಗಳನ್ನು ವಿವರಿಸುವ ದರಗಳ ನೈಜ ಕಾರ್ಯವನ್ನು ಮತ್ತು ವಾಯಿದಾ ದರಗಳನ್ನು ಮುಂದಿನ ಲೇಖನದಲ್ಲಿ ವಿವೇಚಿಸಲಾಗುವುದು.

# ಕರ್ನಾಟಕ ಪುಸ್ತಕ ಭಂಡಾರ ಅಂಡ್ ಜನರಲ್ ಸ್ಟೋರ್ಸ್

**ಕಿರೀಕ ಹಂಚಿಕೆದಾರರು ಮತ್ತು ಸ್ಟೇಷನರಿ ವ್ಯಾಪಾರಸ್ಥರು**

ಶಾಂತೇಶ್ವರ ಬೀದಿ, ಸಿಂದಗಿ-586 128
ಬಿಜಾಪುರ ಜಿಲ್ಲೆ

ವಿತರಕರು :

1 ಮಲ್ಹೋತ್ರ ಇಂಟರ್‌ನ್ಯಾಷನಲ್ ಲಿ., ಮುಂಬಯಿ
2 ಜೀಪ್ ಇಂಡಸ್ಟ್ರಿಯಲ್ ಸಿಂಡಿಕೇಟ್ ಲಿ., ಅಲಹಾಬಾದ್
3 ನ್ಯೂಟ್ರಿನ್ ಕನ್‌ಫೆಕ್ಷನರಿ ಕಂಪೆನಿ, ಲಿ., ಚಿತ್ತೂರು
4 ಸೀಬಾ ಗೈಗಿ ಇಂಡಿಯಾ ಲಿ., ಮುಂಬಯಿ
5 ಮಧುರ ಕೋಟ್ಸ್ ಲಿ., ಬೆಂಗಳೂರು
6 ತೋಷಿಬ ಆನಂದ್ ಬ್ಯಾಟರೀಸ್ ಲಿ., ಕೊಚಿನ್
7 ಪೊದ್ದಾರ್ ಸೇಲ್ಸ್ ಕಾರ್ಪೊರೇಷನ್, ಮುಂಬಯಿ
8 ಕ್ರಿಸ್ಟ್ ಬಿಸ್ಕಟ್ ಕಂ., ಬೆಂಗಳೂರು
9 ಮೈಸೂರು ಲ್ಯಾಂಪ್ ವರ್ಕ್ಸ್ ಲಿ., ಬೆಂಗಳೂರು
10 ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿ., ಬೆಂಗಳೂರು

ಮಾಲೀಕರು:
**ರಾಜಶೇಖರ ಸಿದ್ದಣ್ಣ ಮಣೂರ್**
**ಮತ್ತು ಸಹೋದರರು**

# ಕಡಲಾಚೆಯ ಬ್ಯಾಂಕಿಂಗ್: ಒಂದು ವಿವೇಚನೆ

ಸಾ. ರಾಜಗೋಪಾಲ

ಅಂತರರಾಷ್ಟ್ರೀಯ ಬ್ಯಾಂಕಿಂಗಿನ ಒಂದು ವಿಶಿಷ್ಟ ಸ್ವರೂಪವಾದ ಕಡಲಾಚೆಯ ಬ್ಯಾಂಕಿಂಗನ್ನು ವಿವರಿಸುವುದು ಈ ಲೇಖನದ ಉದ್ದೇಶ. ಕಡಲಾಚೆಯ ಬ್ಯಾಂಕಿಂಗ್ ಎಂದರೆ ಯಾವುದೇ ಬಂದರು ಪಟ್ಟಣದಲ್ಲಾಗಲಿ ಕರಾವಳಿ ಪ್ರದೇಶದಲ್ಲಾಗಲಿ ಸಮುದ್ರದ ನಡುಗಡ್ಡೆಯಲ್ಲಾಗಲಿ ನಡೆಯುವ ಬ್ಯಾಂಕ್ ವ್ಯವಹಾರವಲ್ಲ. ಸ್ಥಳೀಯ ಅರ್ಥ ವ್ಯವಸ್ಥೆಯೊಂದಿಗೆ ಘರ್ಷಣೆಯಿಲ್ಲದೆ, ಅಲ್ಲಿಯ ಬ್ಯಾಂಕುಗಳಿಗೆ ಅನ್ವಯಿಸುವ ನಿಯಮ ನಿಯಂತ್ರಣಗಳಿಗೆ ಒಳಪಡದೆ, ಮುಖ್ಯವಾಗಿ ತೆರಿಗೆ ರೇವುಗಳಲ್ಲಿ ಅನಿವಾಸಿಗಳೊಂದಿಗೆ ನಡೆಸುವ ಬ್ಯಾಂಕ್ ವ್ಯವಹಾರವೆಂದು ಸ್ಥೂಲವಾಗಿ ಹೇಳ ಬಹುದು.

ಕಡಲಾಚೆಯ ಬ್ಯಾಂಕಿಂಗ್ ಅಸ್ತಿತ್ವದಲ್ಲಿರುವುದು ತೆರಿಗೆ ರೇವುಗಳಲ್ಲಿ (ಟ್ಯಾಕ್ಸ್‌ಹೇವನ್). ತೆರಿಗೆ ರೇವುಗಳು ರೂಪುಗೊಂಡ ರೀತಿಯನ್ನು ಪರಿಶೀಲಿಸೋಣ. ಇಲ್ಲಿ ತೆರಿಗೆಯೇ ಇಲ್ಲದೆ ಅಥವಾ ಅತ್ಯಂತ ಕಡಿಮೆ ದರದಲ್ಲಿ ತೆರಿಗೆ ನೀಡಿ ಆಸ್ತಿಗಳನ್ನು ಹೊಂದಬಹುದು. ಈ ರೇವುಗಳು ಅಸ್ತಿತ್ವಕ್ಕೆ ಬರಲು ಅಂತರರಾಷ್ಟ್ರೀಯ ಹಣ ಮತ್ತು ಬಂಡವಾಳ ಮಾರುಕಟ್ಟೆಗಳಲ್ಲಾದ ಸ್ಥಿತ್ಯಂತರಗಳು ಕಾರಣ. ಸಾಮಾನ್ಯವಾಗಿ ಹಣ ಸಂಪನ್ಮೂಲಗಳು ಅಭಿವರ್ಧಿತ ದೇಶಗಳ ಕೈಯಲ್ಲಿದ್ದುವು. ಆದರೆ ತೈಲರಾಷ್ಟ್ರಗಳ ಪಾತ್ರ ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ಪ್ರಾಮುಖ್ಯಕ್ಕೆ ಬಂದಂತೆಲ್ಲಾ ಹಣ ಸಂಪನ್ಮೂಲಗಳ ಮೇಲೆ ಇವುಗಳ ಹಿಡಿತ ಹೆಚ್ಚಾಯಿತು; ಪೆಟ್ರೋ-ಡಾಲರ್‌ಗಳ ಪಾತ್ರ ಹಿರಿದಾಯಿತು. ಆದುದರಿಂದ ತೈಲ ಪ್ರಭುಗಳು ವಿನಿಯೋಜನೆಗಳಿಗೆ ಸೂಕ್ತ ಪಾತ್ರಗಳನ್ನು ಹುಡುಕತೊಡಗಿದರು. ಪಶ್ಚಿಮದ ಹಣ ಮಾರುಕಟ್ಟೆಗಳ ಬಿಗಿ ಕ್ರಮ ಮತ್ತು ಅಧಿಕ ತೆರಿಗೆ ಹೇರಿಕೆ ಇವು ತೈಲ ಪ್ರಭುಗಳಿಗೆ ರುಚಿಸಲಿಲ್ಲ. ಪಶ್ಚಿಮ ಮಾರುಕಟ್ಟೆಗಳ ಪರಿಣತರ ಸೇವೆ ಮತ್ತು ದಕ್ಷತೆಯನ್ನು ಮೆಚ್ಚಿಕೊಂಡರೂ, ಹೆಚ್ಚಿನ ತೆರಿಗೆ ತೆರಲು ಸಿದ್ಧರಿರಲಿಲ್ಲ. ಆದುದರಿಂದ ಇದೇ ದಕ್ಷತೆಯುಳ್ಳ, ಪರಿಣತ ಸೇವೆ ನೀಡುವ ಕೇಂದ್ರಗಳನ್ನು ಬೇರೆಡೆ ಹುಡುಕಲು ಪ್ರಯತ್ನಿಸಿದರು. ತೆರಿಗೆ ರೇವುಗಳು ಅವರಿಗೆ ಸೂಕ್ತ ಸ್ಥಳಗಳಾದುವು. ಅಂದರೆ ತೆರಿಗೆ ರೇವುಗಳು ಎಪ್ಪತ್ತರ ದಶಕದ ತೈಲ ಬಿಕ್ಕಟ್ಟಿನ ಅನಂತರ ಆವಿಷ್ಕಾರಗೊಂಡ ಕೇಂದ್ರಗಳಲ್ಲ. ಈ ಹಿಂದೆಯೇ ಈ ಕೇಂದ್ರಗಳಲ್ಲಿ ಬಹುರಾಷ್ಟ್ರೀಯ ಸಂಸ್ಥೆಗಳಿದ್ದು ಅವು ತೆರಿಗೆ ಸೌಲಭ್ಯವನ್ನು ಆಗಲೇ ಬಳಸಿಕೊಳ್ಳುತ್ತಿದ್ದುವು.

ಯೂರೊ-ಡಾಲರ್ ಮತ್ತು ಯೂರೊ-ಕರೆನ್ಸಿಗಳ ಅಧಿಕ ಬಳಕೆಯಿಂದಾಗಿ ಅವು ಅಂತರರಾಷ್ಟ್ರೀಯ ಮೀಸಲು ಆಸ್ತಿಗಳಾಗಿ ಬೆಳೆಯತೊಡಗಿದುವು. ತೆರಿಗೆ ರೇವುಗಳು ಈ ಆಸ್ತಿಯನ್ನು ಬೆಳೆಸುವ ಅತ್ಯಂತ ಸೂಕ್ತ ಕೇಂದ್ರಗಳಾದುವು. ಆದುದರಿಂದ ಬ್ಯಾಂಕುಗಳು ಇಲ್ಲಿಗೆ ಕಾಲಿರಿಸಿ ಈ ಬೆಳವಣಿಗೆಯಲ್ಲಿ ಪಾಲ್ಗೊಂಡುವು.

ಬರ್ಮುಡ, ಬಹಾಮಾಸ್, ಕೇಮನ್ ದ್ವೀಪಗಳು, ಚಾನಲ್ ದ್ವೀಪಗಳು, ಲುಕ್ಸೆಂಬರ್ಗ್, ಪನಾಮಾ, ಸಿಂಗಪುರ, ಹಾಂಗ್ ಕಾಂಗ್ ಇವು ಇಂಥ ಕೇಂದ್ರಗಳಲ್ಲಿ ಕೆಲವು.

### ತೆರಿಗೆ ರೇವುಗಳ ಸ್ವರೂಪ

ತೆರಿಗೆ ರೇವುಗಳು ಸಾಮಾನ್ಯವಾಗಿ ಚಿಕ್ಕ ರಾಷ್ಟ್ರಗಳಾಗಿರುತ್ತವೆ. ಬಹುಮಟ್ಟಿಗೆ ದ್ವೀಪಗಳಾಗಿರುತ್ತವೆ, ಇಲ್ಲವೇ ದೊಡ್ಡ ನಗರ ಅಥವಾ ಪ್ರದೇಶಗಳಾಗಿರುತ್ತವೆ. ಆದುದರಿಂದ ಇವುಗಳ ಅರ್ಥವ್ಯವಸ್ಥೆ ಸಂಕೀರ್ಣವಾಗಿರುವುದಿಲ್ಲ. ತೆರಿಗೆಯ ಹೊಣೆಯೂ ಕಡಿಮೆ. ಆಂತರಿಕವಾಗಿ ಹೆಚ್ಚಿನ ಆರ್ಥಿಕ ಚಟುವಟಿಕೆಗಳಿರುವುದಿಲ್ಲ. ವಿದೇಶಿ ಬ್ಯಾಂಕುಗಳು ಇಲ್ಲಿ ವ್ಯವಹಾರ ನಡೆಸುವುದರಿಂದ ಈ ದೇಶಗಳಿಗೆ ಕೆಲವಾರು ಲಾಭಗಳಿರುವುದರಿಂದ, ಸಾಮಾನ್ಯವಾಗಿ ಅಂತರರಾಷ್ಟ್ರೀಯ ಖ್ಯಾತಿಯ ಬ್ಯಾಂಕುಗಳು ಇಲ್ಲಿ ತಳವೂರಲು ಪ್ರಜ್ಞಾಪೂರ್ವಕವಾಗಿಯೇ ಅನುಮತಿ ನೀಡಲಾಗಿರುತ್ತದೆ.

ಉದ್ದೇಶಪೂರ್ವಕವಾಗಿಯೇ ಕೇಂದ್ರಗಳಲ್ಲಿ ಸಂಪರ್ಕ ಸಾಧನಗಳನ್ನು ಅತ್ಯಾಧುನಿಕವಾಗಿಡಲಾಗಿರುತ್ತದೆ. ಇದರಿಂದಾಗಿ ವಿಶ್ವದ ಹಣ ಮಾರುಕಟ್ಟೆಗಳಿಗೆ ಯಾವುದೇ ಕ್ಷಣದಲ್ಲಿ ಸಂಪರ್ಕ ಕಲ್ಪಿಸಿಕೊಳ್ಳಬಹುದು. ಇದಕ್ಕೆ ಪೂರಕವಾದ ಅಧೋರಚನೆಯೂ ಸಿದ್ಧವಾಗಿರುತ್ತದೆ.

### ಶಾಖಾವಿಸ್ತರಣೆಗೆ ಕಾರಣಗಳು

ಈ ಮುಂದಿನ ಕಾರಣಗಳಿಗಾಗಿ ಬ್ಯಾಂಕುಗಳು ತೆರಿಗೆ ರೇವುಗಳಲ್ಲಿ ತಮ್ಮ ಶಾಖೆ, ಅಧೀನ ಕಂಪನಿ ಮತ್ತು ನ್ಯಾಸಗಳನ್ನು ತೆರೆಯುತ್ತವೆ:

1 ತೆರಿಗೆ ಇಲ್ಲದಿರುವುದು ಅಥವಾ ತೆರಿಗೆ ಅತ್ಯಂತ ಕಡಿಮೆ ದರದಲ್ಲಿರುವುದು ಮುಖ್ಯ ಆಕರ್ಷಣೆ.

2 ಅನಿವಾಸಿಗಳಿಂದ (ನಾನ್-ರೆಸಿಡೆಂಟ್ಸ್) ಠೇವಣಿಗಳನ್ನು ಸಂಗ್ರಹಿಸಿ, ತಮ್ಮ ಸಂಪನ್ಮೂಲಗಳನ್ನು ಹೆಚ್ಚಿಸಿಕೊಳ್ಳುವುದು. ಅಂತರರಾಷ್ಟ್ರೀಯ ದ್ರವತ್ವಕ್ಕಾಗಿ ನಡೆಯುವ ಸ್ಪರ್ಧೆಯಲ್ಲಿ ಭಾಗವಹಿಸುವುದು.

3 ತೆರಿಗೆ ರೇವುಗಳಲ್ಲಿರುವ ತಮ್ಮ ಶಾಖೆಗಳಿಂದ, ಅಧೀನ ಸಂಸ್ಥೆಗಳಿಂದ, ನ್ಯಾಸಗಳಿಂದ ಬಂದ ಲಾಭ ಮಾತೃ ಸಂಸ್ಥೆಗೆ ವರ್ಗವಾಗುವವರೆಗೆ ಲಾಭ ತೆರಿಗೆಯನ್ನು ಮುಂದೂಡಬಹುದೆಂಬ ರಿಯಾಯಿತಿ ಅಭಿವರ್ಧಿತ ದೇಶಗಳ ತೆರಿಗೆ ವ್ಯವಸ್ಥೆಯಲ್ಲಿದೆ. ಈ ರಿಯಾಯಿತಿಯನ್ನು ಬಳಸಿಕೊಂಡು ಬ್ಯಾಂಕುಗಳು ತಮ್ಮ ವಿನಿಯೋಜನೆಗಳನ್ನು ಮತ್ತಷ್ಟು ಹೆಚ್ಚಿಸಿಕೊಳ್ಳುತ್ತವೆ.

4 ಬಹುರಾಷ್ಟ್ರೀಯ ಕಂಪನಿಗಳಿಗೆ ಹಣಕಾಸು ಒದಗಿಸಲು ಅನುಕೂಲ ಮಾಡಿಕೊಡುವುದು.

5 ತೆರಿಗೆ ರೇವುಗಳಲ್ಲಿ ಸಾಮಾನ್ಯವಾಗಿ ಅಂತರರಾಷ್ಟ್ರೀಯ ಬ್ಯಾಂಕುಗಳು ಶಾಖಾವಿಸ್ತರಣ ಮಾಡುತ್ತವೆ. ಈ ಬ್ಯಾಂಕುಗಳ ಮೂಲದೇಶಗಳಿಗೆ ಇದರಿಂದ ಲಾಭವುಂಟು. ಇಲ್ಲಿಯ ಬ್ಯಾಂಕುಗಳು ವಿದೇಶಿ ವಿನಿಮಯವನ್ನು ಗಳಿಸುವುದರಿಂದ ಅವುಗಳ ಮಾತೃದೇಶಗಳ ಪಾವತಿ ಶಿಲ್ಕು ಪರಿಸ್ಥಿತಿ ಅನುಕೂಲಕರವಾಗುತ್ತದೆ.

6 ಬೇರೆ ಬೇರೆ ಕೇಂದ್ರದಲ್ಲಿ ಒಂದೇ ಬ್ಯಾಂಕನ್ನು ಗ್ರಾಹಕರು ನಿರೀಕ್ಷಿಸುವುದು ಒಂದು ಕಾರಣವಾದರೆ, ಎಲ್ಲ ಕೇಂದ್ರಗಳಲ್ಲೂ ತಮ್ಮ ಶಾಖೆಗಳನ್ನು ಹೊಂದುವುದು ಪ್ರತಿಷ್ಠೆಯ ವಿಷಯವೆಂದು ಅಂತರರಾಷ್ಟ್ರೀಯ ಬ್ಯಾಂಕುಗಳು ತಿಳಿಯುತ್ತವೆ.

ಬ್ಯಾಂಕುಗಳು ತೆರಿಗೆ ರೇವುಗಳಲ್ಲಿ ಎರಡು ಬಗೆಯ ಕೇಂದ್ರಗಳನ್ನು ತೆರೆಯುತ್ತವೆ:

1 ದಾಖಲೆಯಲ್ಲಿಯ ಕೇಂದ್ರಗಳು ಅಥವಾ ನಾಮ ಮಾತ್ರ ಕೇಂದ್ರಗಳು [ಇವನ್ನು ಪೇಪರ್ ಸೆಂಟರ್, ಶೆಲ್ ಸೆಂಟರ್, ಕ್ಯೂಬಿಕಲ್ ಸೆಂಟರ್, ಬ್ರಾಸ್ ಪ್ಲೇಟ್ ಸೆಂಟರ್ ಎಂದು ಇಂಗ್ಲಿಷಿನಲ್ಲಿ ಕರೆಯುತ್ತಾರೆ]

2 ಕಾರ್ಯಭಾರಾತ್ಮಕ ಕೇಂದ್ರಗಳು (ಫಂಕ್ಷನಲ್ ಸೆಂಟರ್ಸ್)

ದಾಖಲೆಯಲ್ಲಿಯ ಕೇಂದ್ರಗಳಲ್ಲಿ ವಾಸ್ತವವಾಗಿ ಬ್ಯಾಂಕುಗಳು ಇರುವುದಿಲ್ಲ. ಅವು ತೆರಿಗೆ ರೇವಿನ ದಾಖಲೆಯಲ್ಲಿ ನೊಂದಾಯಿತವಾಗಿರುತ್ತವೆ. ಇವುಗಳ ಪುರಾವೆ ಎಂಬಂತೆ ಬ್ಯಾಂಕುಗಳ ಹಿತ್ತಾಳೆ ನಾಮಫಲಕಗಳನ್ನು ಗೋಡೆಗೆ ತೂಗುಹಾಕಿರುತ್ತಾರೆ. ಇಂಥ ಕೇಂದ್ರಗಳ ವ್ಯವಹಾರಗಳನ್ನು ಸ್ಥಳೀಯ ಬ್ಯಾಂಕಾಗಲಿ, ಅಧೀನ ಸಂಸ್ಥೆಯಾಗಲಿ ನೋಡಿಕೊಳ್ಳುತ್ತಿರುತ್ತದೆ. ತಮ್ಮ ಎಷ್ಟೋ ವಿದೇಶಿ ವಹಿವಾಟುಗಳನ್ನು ಈ ಕೇಂದ್ರಗಳ ಪುಸ್ತಕಗಳಲ್ಲಿ ತೋರಿಸಿ ಲಾಭ ಪಡೆಯುತ್ತಾರೆ. ಈ ಕೇಂದ್ರಗಳು ಸ್ಥಳೀಯ ತೆರಿಗೆ ಶುಲ್ಕಗಳಿಗೆ ಪ್ರತಿಕ್ರಿಯಾತ್ಮಕವಾಗಿರುತ್ತವೆ. ಅಂದರೆ ಒಂದು ಕೇಂದ್ರದಲ್ಲಿ ತೆರಿಗೆ ಶುಲ್ಕಗಳು ಹೆಚ್ಚಾದರೆ ಅಲ್ಲಿಯ ವಹಿವಾಟುಗಳನ್ನು ಇಂಥವೇ ಆದ ಇತರ ಕೇಂದ್ರಗಳ ಲ್ಲಿಯ ಪುಸ್ತಕಗಳಲ್ಲಿ ತೋರಿಸಲಾಗುತ್ತದೆ. ನಾಮ ಮಾತ್ರ ಕೇಂದ್ರಗಳು ಒಂದಕ್ಕೊಂದು ಪ್ರತ್ಯಾದೇಶಗಳು. ಅನೇಕ ತೆರಿಗೆ ರೇವುಗಳಲ್ಲಿ ಶಾಖೆಗಳಿರುವುದರಿಂದ ಬ್ಯಾಂಕುಗಳಿಗೆ ಇದು ಸಾಧ್ಯವಾಗುತ್ತದೆ.

ಕಾರ್ಯಭಾರಾತ್ಮಕ ಕೇಂದ್ರಗಳು ಇವಕ್ಕೆ ಭಿನ್ನವಾದಂಥವು. ಅವು ನಾಮ ಮಾತ್ರವಲ್ಲ. ವಾಸ್ತವವಾಗಿ ಬ್ಯಾಂಕು ಶಾಖೆಗಳಿದ್ದು ಸಿಬ್ಬಂದಿ ಇರುತ್ತಾರೆ. ಇಲ್ಲಿ ಠೇವಣಿಗಳ ಸ್ವೀಕಾರ ಮತ್ತು ಸಾಲ ನೀಡಿಕೆ ನಡೆಯುತ್ತದೆ. ಈ ಕೇಂದ್ರಗಳು ಒಂದಕ್ಕೊಂದು ಪ್ರತ್ಯಾದೇಶಗಳಲ್ಲ. ತೆರಿಗೆ ಶುಲ್ಕಗಳ ಏರಿಕೆಗೆ ಇವು ಪ್ರತಿಕ್ರಿಯಾತ್ಮಕವಾಗಿರುವುದಿಲ್ಲ. ವಹಿವಾಟಿನ ವರ್ಗಾವಣೆ ಸಾಧ್ಯವಿಲ್ಲ. ಯಾವುದೇ ವಹಿವಾಟನ್ನು ಕೈಬಿಟ್ಟರೆ ಇವಕ್ಕೇ ನಷ್ಟ.

### ಬ್ಯಾಂಕುಗಳ ಕಾರ್ಯಗಳು

ತೆರಿಗೆ ರೇವುಗಳಲ್ಲಿಯ ಬ್ಯಾಂಕುಗಳು ಅಲ್ಲಿಯ ಅನಿವಾಸಿಗಳಿಂದ ಠೇವಣಿಗಳನ್ನು ಸ್ವೀಕರಿಸಿ, ಅವರಿಗೆ ಸಾಲಗಳನ್ನು ನೀಡುತ್ತವೆ. ಕೆಲವು ಕೇಂದ್ರಗಳಲ್ಲಿ ಅನಿವಾಸಿಗಳೊಂದಿಗೆ ನಡೆಸುವ ವ್ಯವಹಾರಗಳು ತೆರಿಗೆಗೆ ಅರ್ಹವಾಗುವುದಿಲ್ಲ.

ಕೆಲವು ಕೇಂದ್ರಗಳಲ್ಲಿ ಲಾಭ ತೆರಿಗೆ ಇರುವುದಿಲ್ಲ; ಇದ್ದರೂ ಅದರ ಪ್ರಮಾಣ ಕಡಿಮೆ ಇರುತ್ತದೆ. ಬ್ಯಾಂಕುಗಳು ತಮ್ಮ ಲಾಭವನ್ನು ವಿನಿಯೋಜನೆಗಳಲ್ಲಿ ತೊಡಗಿಸಿ ಗ್ರಾಹಕರಿಗೆ ಹೆಚ್ಚಿನ ಪ್ರತಿಫಲಗಳನ್ನು ದೊರಕಿಸಿಕೊಡುತ್ತವೆ. ತೆರಿಗೆ ರೇವುಗಳಲ್ಲಿಯ ಸಂಪತ್ತು ತೆರಿಗೆ, ದಾನ ತೆರಿಗೆ, ಆದಾಯ ಇತ್ಯಾದಿಗಳ ರಿಯಾಯಿತಿಗಳನ್ನು ಬಳಸಿಕೊಂಡು ಬ್ಯಾಂಕುಗಳು ಹೆಚ್ಚಿನ ದ್ರವತ್ವವನ್ನು ಸೃಷ್ಟಿಸುತ್ತವೆ.

ಯೂರೋ-ಕರೆನ್ಸಿ ಮತ್ತು ವಿದೇಶಿ ಕರೆನ್ಸಿಗಳನ್ನು ತೆರಿಗೆ ರೇವುಗಳಲ್ಲಿಯ ನಿವಾಸಿಗಳಿಗೆ ಇಲ್ಲಿಯ ಬ್ಯಾಂಕುಗಳು ಒದಗಿಸುತ್ತವೆ. ಸಂಪರ್ಕ ಸಾಧನಗಳು ಅತ್ಯಾಧುನಿಕವಾಗಿರುವುದರಿಂದ ಇವು ಅಂತರರಾಷ್ಟ್ರೀಯ ಹಣ ಮತ್ತು ಬಂಡವಾಳ ಮಾರುಕಟ್ಟೆಗಳಿಗೆ ಕೊಂಡಿಗಳಂತೆ ಕಾರ್ಯ ನಿರ್ವಹಿಸುತ್ತವೆ. ವಿದೇಶಿ ವಿನಿಯೋಜನೆಗಳ ಮೇಲೆ ತೆರಿಗೆ ತೆರಬೇಕಾಗಿಲ್ಲದಿರುವುದರಿಂದ ಈ ಬ್ಯಾಂಕುಗಳು ವಿದೇಶಿ ವಿನಿಯೋಜನಾ ಅವಕಾಶಗಳನ್ನು ಗ್ರಾಹಕರಿಗೆ ತೋರಿಸಿ ಅವು ಹೆಚ್ಚಲು ಸಹಾಯಮಾಡುತ್ತವೆ.

ಕಡಲೀಚೆಯ ಬ್ಯಾಂಕುಗಳಿಗೆ ಅನ್ವಯಿಸುವ ಅನೇಕ ನಿಯಂತ್ರಣ ಮತ್ತು ನಿಯಮಗಳು ಕಡಲಾಚೆಯ ಬ್ಯಾಂಕು

ಗಳಿಗೆ ಅನ್ವಯಿಸದೆ ಒಂದು ರೀತಿಯ ಉದಾರ ನೀತಿಯನ್ನು ಆತಿಥೇಯ ರಾಷ್ಟ್ರ ತಳೆದಿರುವುದರಿಂದ, ಅದರಿಂದ ಉಂಟಾಗುವ ಸವಲತ್ತುಗಳನ್ನು ಈ ಬ್ಯಾಂಕುಗಳು ಚೆನ್ನಾಗಿಯೇ ಬಳಸಿಕೊಳ್ಳುತ್ತವೆ.

ತತ್‌ಕ್ಷಣದ ಮತ್ತು ವಾಯಿದಾ ಮಾರುಕಟ್ಟೆಗಳಿಗೆ ಇವು ವಿದೇಶಿ ಕರೆನ್ಸಿಗಳನ್ನು ಬೇಕಾದಾಗ ಒದಗಿಸುತ್ತವೆ, ಇಲ್ಲವೆ ಅವಕ್ಕೆ ಬೆಂಬಲವಾಗಿ ನಿಲ್ಲುತ್ತವೆ. ಆತಿಥೇಯ ಸರ್ಕಾರಗಳೇ ಕೆಲವು ಸಾರಿ ಸ್ಥಳೀಯ ಯೋಜನೆಗಳಿಗೆ ಹಣಕಾಸು ಒದಗಿಸುವಂತೆ ಇವನ್ನು ಕೇಳಿಕೊಳ್ಳುತ್ತವೆ. ಕೋರಿಕೆಯನ್ನು ಕಡಲಾಚೆಯ ಬ್ಯಾಂಕುಗಳು ಪೂರೈಸುತ್ತವೆ.

ತೆರಿಗೆ ರೇವುಗಳಲ್ಲಿಯ ಅಭಿವರ್ಧಿತ ದೇಶಗಳ ಬ್ಯಾಂಕುಗಳು ನ್ಯಾಸ, ಅಧೀನ ಸಂಸ್ಥೆ ಅಥವಾ ಶಾಖೆಗಳನ್ನು ತೆರೆದು ಲಾಭ ಗಳಿಸಿ, ತೆರಿಗೆಯನ್ನು ಮುಂದೂಡುತ್ತವೆ. ಇದರಿಂದ ಅಂತರರಾಷ್ಟ್ರೀಯ ದ್ರವತ್ವ ಹೆಚ್ಚುತ್ತದೆ.

### ಆತಿಥೇಯರಿಗೆ ದೊರೆಯುವ ಪ್ರತಿಫಲ ಹಾಗು ವೆಚ್ಚಗಳು

ಆತಿಥೇಯ ದೇಶಗಳು ಕಡಲಾಚೆಯ ಬ್ಯಾಂಕುಗಳಿಗೆ ಆಹ್ವಾನ ನೀಡುವುದು ತಮಗೆ ಪ್ರತಿಫಲವಿರುವುದರಿಂದಲೆ. ತೆರಿಗೆ ರೇವುಗಳಲ್ಲಿಯ ಅತ್ಯಂತ ಕ್ರಿಯಾತ್ಮಕ ವಲಯವೆಂದರೆ ಆರ್ಥಿಕ ವಲಯ. ಬ್ಯಾಂಕಿಂಗ್ ಕ್ಷೇತ್ರ ವಿಕಸನಶೀಲವಾದುದರಿಂದ ಅದು ಚಟುವಟಿಕೆಯಿಂದ ಕೂಡಿರುತ್ತದೆ.

ಆತಿಥೇಯ ಆರ್ಥಿಕ ವ್ಯವಸ್ಥೆಗೆ ದೊರೆಯುವ ಪ್ರತಿಫಲಗಳೆಂದರೆ ಪರವಾನಗಿ ಶುಲ್ಕ, ನೋಂದಣಿ ಶುಲ್ಕ ಮತ್ತು ಲಾಭದ ಮೇಲೆ ವಿಧಿಸುವ ತೆರಿಗೆ.

ಕ್ರಿಯಾತ್ಮಕ ಕೇಂದ್ರಗಳಲ್ಲಿ ಕೆಲಸ ಮಾಡಲು ಉನ್ನತ ಸ್ಥಾನವನ್ನು ಹೊರತುಪಡಿಸಿ, ಉಳಿದ ಸ್ಥಾನಗಳಿಗೆ ಸ್ಥಳೀಯರನ್ನೇ ನೇಮಿಸಿಕೊಳ್ಳಬೇಕಾಗುತ್ತದೆ. ಇದರಿಂದ ಬ್ಯಾಂಕುಗಳು ತರಬೇತಿ, ಮೇಲ್ವಿಚಾರಣೆ, ವಿದ್ಯಾಭ್ಯಾಸ ಮುಂತಾದುವುಗಳ ಮೇಲೆ ಖರ್ಚು ಮಾಡಬೇಕಾಗುತ್ತದೆ. ತರಬೇತಿ ಪಡೆದ ಉದ್ಯೋಗಿಗಳ ತಂಡ ಸಿದ್ಧವಾಗುತ್ತದೆ. ಇವರಿಗೆ ನೀಡುವ ಸಂಬಳಗಳೂ ಸ್ಥಳೀಯವಾಗಿ ಖರ್ಚಾಗುತ್ತವೆ.

ಈ ಬ್ಯಾಂಕುಗಳಲ್ಲಿ ಉನ್ನತ ಅಧಿಕಾರದಲ್ಲಿರುವವರು ಅನಿವಾಸಿಗಳಾಗಿದ್ದು, ಅವರು ತಮ್ಮ ಮೂಲದೇಶದಿಂದ ತಮಗೆ ಬೇಕಾದ ವಸ್ತುಗಳನ್ನು ಆಮದು ಮಾಡಿಕೊಳ್ಳುತ್ತಾರೆ. ಆದುದರಿಂದ ಇವರ ಗಳಿಕೆ ಆಮದಿಗೆ ವ್ಯಯವಾಗುತ್ತದೆ. ಆದರೆ ಈ ಆಮದುಗಳ ಮೇಲೆ ಆತಿಥೇಯ ರಾಷ್ಟ್ರಗಳಿಗೆ ಆಮದು ಸುಂಕ ಬರುತ್ತದೆ.

ಆತಿಥೇಯ ರಾಷ್ಟ್ರಗಳ ಬಾಗಿಲಲ್ಲೇ ವಿದೇಶಿ ಕರೆನ್ಸಿಗಳು ದೊರೆಯುವ ಅವಕಾಶಗಳನ್ನು ಈ ಬ್ಯಾಂಕುಗಳು ಕಲ್ಪಿಸುತ್ತವೆ. ಕಡಲಾಚೆಯ ಬ್ಯಾಂಕುಗಳಿಗೂ—ಅವುಗಳಿಗೆ ಬೇಕಾದಾಗ—ವಿದೇಶಿ ಸಾಲ ಮತ್ತು ವಿದೇಶಿ ಕರೆನ್ಸಿಗಳನ್ನು ಒದಗಿಸುತ್ತವೆ. ಈ ಬ್ಯಾಂಕುಗಳು ಅಂತರರಾಷ್ಟ್ರೀಯ ಮಟ್ಟದವುಗಳಾದುದರಿಂದ ಈ ಅವಕಾಶಗಳು ಸಾಧ್ಯ.

ಕಡಲಾಚೆಯ ಬ್ಯಾಂಕುಗಳು ಅತ್ಯಂತ ಚತುರತೆಯಿಂದ ಮತ್ತು ದಕ್ಷತೆಯಿಂದ ಕೆಲಸ ಮಾಡುವ ಸಂಸ್ಥೆಗಳಾಗಿವೆ. ಸ್ವಲ್ಪ ಎಚ್ಚರತಪ್ಪಿದರೆ ಅವು ಸ್ಥಳೀಯ ಅರ್ಥವ್ಯವಸ್ಥೆಯಲ್ಲಿ ಗೊಂದಲವನ್ನುಂಟುಮಾಡುತ್ತವೆ. ಆತಿಥೇಯ ಅರ್ಥವ್ಯವಸ್ಥೆ ದಕ್ಷತೆಯಿಂದ ಕೆಲಸ ಮಾಡಲು ಈ ಬ್ಯಾಂಕುಗಳು ಪರೋಕ್ಷವಾಗಿ ಸಹಾಯ ಮಾಡುತ್ತವೆ.

ತೆರಿಗೆ ರೇವುಗಳಿಗೆ ತಗಲುವ ಅತ್ಯಂತ ದೊಡ್ಡ ವೆಚ್ಚವೆಂದರೆ ಸಂಪರ್ಕ ಸಾಧನಗಳನ್ನು ಅತ್ಯಾಧುನಿಕವಾಗಿಟ್ಟುಕೊಳ್ಳುವುದಕ್ಕೆ ಖರ್ಚು. ಅತ್ಯಾಧುನಿಕ ಸಂಪರ್ಕ ಸಾಧನಗಳನ್ನು ಸ್ಥಾಪಿಸದಿದ್ದರೆ ಇವುಗಳ ಚಟುವಟಿಕೆಗಳು ಸ್ತಬ್ಧವಾಗುತ್ತವೆ, ಹಾಗೂ ವೈಶಿಷ್ಟ್ಯಹೀನವಾಗುತ್ತವೆ.

### ನಿಯಂತ್ರಣಗಳು

ಕಡಲಾಚೆಯ ಬ್ಯಾಂಕುಗಳು ಇಷ್ಟೆಲ್ಲ ಮಾಡುವ ಸಾಧ್ಯತೆಯಿರುವುದರಿಂದ ಅವುಗಳ ಮೇಲೆ ಒಂದಲ್ಲ ಒಂದು ರೀತಿಯ ಹತೋಟಿಯನ್ನಿಟ್ಟುಕೊಳ್ಳಬೇಕಾಗುತ್ತದೆ. ಇಲ್ಲವಾದರೆ ಅವುಗಳಿಂದ ಗೊಂದಲ ಉಂಟಾಗುವುದು ಸಹಜ.

ಬ್ಯಾಂಕುಗಳು ಗಳಿಸುವ ಲಾಭದ ಮೇಲೆ ತೆರಿಗೆ ವಿಧಿಸದಿದ್ದರೆ ಅದು ಹೆಚ್ಚಿನ ದ್ರವತ್ವಕ್ಕೆ ಹಾದಿ ಮಾಡಿಕೊಡುತ್ತದೆ. ಮತ್ತು ಆತಿಥೇಯ ಅರ್ಥವ್ಯವಸ್ಥೆಗೆ ಪ್ರತಿಫಲ ಸಿಗುವುದೂ ಕಡಿಮೆಯಾದುದರಿಂದ ಲಾಭ ತೆರಿಗೆಯನ್ನು ಈಗೀಗ ಎಲ್ಲ ಕೇಂದ್ರಗಳಲ್ಲೂ ವಿಧಿಸಲಾರಂಭಿಸಿದ್ದಾರೆ. ನಿಯಂತ್ರಣದ ಒಂದು ಸಾಧನವಾಗಿ ತೆರಿಗೆ ಕೇಂದ್ರಗಳಲ್ಲಿಯ ಬ್ಯಾಂಕುಗಳು ಆಸ್ತಿ ಮತ್ತು ಹೊಣೆಗಳನ್ನು ಹೊಂದಿರಬೇಕೆಂಬ ನಿಯಮವನ್ನು ಜಾರಿಗೆ ತರಲಾಗುತ್ತಿದೆ.

ಹಾಂಗ್‌ಕಾಂಗ್‌ನಲ್ಲಿ ಠೇವಣಿಗಳ ಮೇಲೆ ಪಡೆಯುವ ಬಡ್ಡಿಗೆ ತೆರಿಗೆಯಿಂದ ವಿನಾಯಿತಿ ಇರುತ್ತದೆ. ಅಂತೇ ಸಾಲಗಳ ಮೇಲೆ ತೆತ್ತ ಬಡ್ಡಿ ಆದಾಯ ತೆರಿಗೆಯಿಂದ ವಿನಾಯಿತಿ ಪಡೆಯುತ್ತದೆ. ಈ ದ್ವಿವಿಧ ಸೌಲಭ್ಯವನ್ನು ಪಡೆಯಲು ತೋರ್ಕೆಯ ಸಾಲಗಳ (ಡಮ್ಮಿ ಲೋನ್ಸ್) ಸೃಷ್ಟಿ ಪ್ರಾರಂಭವಾಗುತ್ತದೆ. ತೆರಿಗೆಗಳ್ಳತನಕ್ಕೆ ಅನುವು ಮಾಡಿಕೊಡುತ್ತದೆ. ಕಡಲಾಚೆಯ ಬ್ಯಾಂಕುಗಳು ತಾವು ವ್ಯವಹರಿಸುವ ಗ್ರಾಹಕರ ಬಗ್ಗೆ ಗೋಪ್ಯತೆಯನ್ನು ಕಾಪಾಡಿಕೊಳ್ಳುವುದರಿಂದ ಇವುಗಳೊಂದಿಗೆ ಸ್ಥಳೀಯರು ವ್ಯವಹರಿಸಿದರೂ ತಿಳಿಯುವುದಿಲ್ಲ. ಇದರಿಂದ ಉಂಟಾಗುವ ತೊಂದರೆಯನ್ನು ನೀಗಲು ಪನಾಮಾ ಮೊದಲಾದ ಕೇಂದ್ರಗಳಲ್ಲಿ ಸ್ಥಳೀಯರೊಂದಿಗೆ ನಡೆಸುವ ವ್ಯವಹಾರಗಳ ಮೇಲೆ ತೆರಿಗೆ ವಿಧಿಸಲಾಗುತ್ತದೆ.

ಈ ಬ್ಯಾಂಕುಗಳು ಅನಿಯಂತ್ರಿತವಾಗಿಬಿಟ್ಟರೆ ಸ್ಥಳೀಯ ಬ್ಯಾಂಕುಗಳೊಂದಿಗೆ ಸ್ಪರ್ಧಿಸಬಹುದು. ಈ ಸ್ಪರ್ಧೆ ಅನಾರೋಗ್ಯಕರವಾದ ಪೈಪೋಟಿಗೆ ಎಡೆಮಾಡಿಕೊಡುತ್ತದೆ. ಇದನ್ನು ತಪ್ಪಿಸಲು ಬೇರೆ ಬೇರೆ ಕೇಂದ್ರಗಳ ಅನುಭವಗಳ ಆಧಾರದ ಮೇಲೆ ನಿಯಮಗಳನ್ನು ರೂಪಿಸಿ ಜಾರಿಗೆ ತರಲಾಗುತ್ತಿದೆ.

ಅಭಿವರ್ಧಿತ ದೇಶಗಳ ತೆರಿಗೆ ವ್ಯವಸ್ಥೆಯಲ್ಲಿದ್ದ ರಿಯಾಯತಿಯನ್ನು ಈಗ ಕಸಿದುಕೊಳ್ಳಲಾಗುತ್ತಿದೆ. ಆದುದರಿಂದ ಈ ದೇಶಗಳ ಬ್ಯಾಂಕುಗಳು ಕಡಲಾಚೆಯ ಶಾಖೆಗಳನ್ನು ತೆರಿಗೆ ರೇವುಗಳಲ್ಲಿ ತೆರೆಯುವುದು ಈಗ ದುಬಾರಿಯ ವಿಷಯವಾಗಿ ಪರಿಣಮಿಸುತ್ತಿದೆ.

### ಅಭಿವೃದ್ಧಿಶೀಲ ದೇಶಗಳು ಮತ್ತು ತೆರಿಗೆ ರೇವುಗಳು

ಅಭಿವೃದ್ಧಿಶೀಲ ದೇಶಗಳ ಬ್ಯಾಂಕುಗಳು ತೆರಿಗೆ ರೇವುಗಳಲ್ಲಿ ತಮ್ಮ ಶಾಖೆಗಳನ್ನು ತೆರೆದು ಅಲ್ಲಿಯ ಸೌಲಭ್ಯಗಳನ್ನು ಬಳಸಿಕೊಳ್ಳಬಹುದು. ಸಾಮಾನ್ಯವಾಗಿ ಈ ದೇಶಗಳ ಬ್ಯಾಂಕುಗಳ ಬಂಡವಾಳ ತಳ (ಕ್ಯಾಪಿಟಲ್ ಬೇಸ್) ಹೆಚ್ಚಿಲ್ಲದಿರುವುದರಿಂದ ಇಂಥ ಕೇಂದ್ರಗಳಲ್ಲಿ ಶಾಖೆಗಳನ್ನು ತೆರೆದು ಬಂಡವಾಳ ತಳವನ್ನು ಹಿಗ್ಗಿಸಿಕೊಳ್ಳಬಹುದು.

ಈ ದೇಶಗಳ ಬ್ಯಾಂಕುಗಳು ತೆರಿಗೆ ಕೇಂದ್ರಗಳಲ್ಲಿ ವ್ಯವಹರಿಸುವುದರಿಂದ ವಿದೇಶಿ ಕರೆನ್ಸಿಗಳನ್ನು ಹೆಚ್ಚು ಹೆಚ್ಚು ಪಡೆದು ಬೆಳೆಯಬಹುದು. ಇದರಿಂದ ಅವುಗಳ ಮೂಲ ದೇಶಗಳಿಗೆ ಅನುಕೂಲವಿದೆ. ವಿದೇಶಿ ಕರೆನ್ಸಿ, ಯೂರೋ-ಡಾಲರ್ ಮತ್ತು ಯೂರೋ-ಕರೆನ್ಸಿಗಳ ಶಿಲ್ಕುಗಳು ಹೆಚ್ಚಿದಂತೆ ಆಯಾ ದೇಶಗಳ ಪಾವತಿ ಶಿಲ್ಕುಗಳು ಪ್ರತಿಕೂಲ ಸ್ಥಿತಿಯಿಂದ ಅನುಕೂಲ ಸ್ಥಿತಿಗೆ ಪರಿವರ್ತನೆಗೊಳ್ಳಲಾರಂಭಿಸುತ್ತವೆ.

ಅಂತರರಾಷ್ಟ್ರೀಯ ದ್ರವತ್ವಕ್ಕೆ ಯಾವಾಗಲೂ ಪೈಪೋಟಿ ಇದ್ದೇ ಇರುತ್ತದೆ. ಅಭಿವೃದ್ಧಿಶೀಲ ರಾಷ್ಟ್ರಗಳ ಬ್ಯಾಂಕುಗಳು ಈ ಸ್ಪರ್ಧೆಯಲ್ಲಿ ಪಾಲ್ಗೊಂಡು ತಮ್ಮ ಪಾಲನ್ನು ಪಡೆದುಕೊಳ್ಳಬೇಕು. ಶಾಖಾ ವಿಸ್ತರಣೆಯಿಂದ ಈ ಬ್ಯಾಂಕುಗಳ ಪಾತ್ರವೂ ವಿಸ್ತಾರವಾಗುತ್ತದೆ.

ಭಾರತದಲ್ಲಿ ಮುಂಬಯಿಯನ್ನು ತೆರಿಗೆ ರೇವನ್ನಾಗಿ ಮಾಡಲು ಆಸಕ್ತವಲಯಗಳಲ್ಲಿ ಚರ್ಚೆ ನಡೆಯುತ್ತಿದೆ. ನಮ್ಮಲ್ಲಿ ಈ ರೀತಿಯ ಕ್ಷೇತ್ರವನ್ನು ಸೃಷ್ಟಿಸುವುದು ಎಷ್ಟರ ಮಟ್ಟಿಗೆ ಸಾಧ್ಯ ಎಂಬುದನ್ನು ಮೇಲೆ ಹೇಳಿದ ಸ್ವರೂಪ, ಸಾಧಕ-ಬಾಧಕ, ಮತ್ತು ಲಾಭ-ನಷ್ಟಗಳ ಹಿನ್ನೆಲೆಯಲ್ಲಿ ತೀರ್ಮಾನಿಸಬೇಕು.

## ಗ್ರಂಥಋಣ


1. Off-shore Banking Centres: Benefits & Costs, Ian McCarthy, *Finance & Development*, Dec. 1979
2. Tax Havens Explained, *Finance & Development*, Mar. 76
3. Off-shore Banking— A Structural Discussion, S. Parthasarthy, *State Bank of India Monthly Review*, Aug.79
4. Off-shore Banking & its Prospectus: A View from India, A. Raghurama, *Southern Economist*, April 15, 1982

# ಕನ್ನಡದಲ್ಲಿ ಮೊದಲ ಬಾರಿಗೆ ಬ್ಯಾಂಕಿಂಗ್ ವಿಚಾರ ಸಂಕಿರಣ

ಸಾ. ಅ. ಮಂಜುನಾಥ

ಭಾರತೀಯ ಸ್ಟೇಟ್ ಬ್ಯಾಂಕಿನ ವಿವಿಧ ಶಾಖೆಗಳಲ್ಲಿರುವ ಕನ್ನಡ ಸಂಘಗಳು ಸೇರಿ ರಚಿಸಿಕೊಂಡಿರುವ ಒಕ್ಕೂಟ ಸಮನ್ವಯ ಸಮಿತಿಯೊಂದಿಗೆ ಬೆಂಗಳೂರಿನ ಮೈಸೂರು ಬ್ಯಾಂಕಿನ ಕನ್ನಡ ಬಳಗ, ಬರೋಡ ಬ್ಯಾಂಕ್ ಕನ್ನಡ ಸಂಘ, ಯೂಕೊ ಬ್ಯಾಂಕ್ ಕನ್ನಡ ಸಂಘ—ಇವುಗಳ ಸದಸ್ಯರಿಗೆ ತಾವು ನಡೆಸುವ ಸಾಹಿತ್ಯಕ ಸಾಂಸ್ಕೃತಿಕ ಚಟುವಟಿಕೆಗಳ ಜೊತೆಗೆ ತಾವು ಕೆಲಸ ಮಾಡುವ ಬ್ಯಾಂಕಿಂಗ್ ಕ್ಷೇತ್ರದ ಕುರಿತಾಗಿ ಕನ್ನಡದಲ್ಲಿ ಏನಾದರೂ ಕಾರ್ಯಕ್ರಮ ನಡೆಸಬೇಕು, ಅದರಲ್ಲೂ ಹೊಸತನವಿರುವ ವೈಶಿಷ್ಟ್ಯಪೂರ್ಣ ಕಾರ್ಯಕ್ರಮ ನಡೆಸಬೇಕು ಎಂಬ ಬಯಕೆ. ಅದರಿಂದಾಗಿ ಅವರು ರೂಪಿಸಿದ್ದು ಕನ್ನಡದಲ್ಲಿ ಮೊಟ್ಟ ಮೊದಲ ಬಾರಿಗೆ ಬ್ಯಾಂಕಿಂಗ್ ಕುರಿತಾದ ವಿಚಾರ ಸಂಕಿರಣವೊಂದನ್ನು. 1982ರ ಮಾರ್ಚ್ 6 ಶನಿವಾರ ಮಧ್ಯಾಹ್ನ ಬೆಂಗಳೂರಿನ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಸಭಾಂಗಣದಲ್ಲಿ ಈ ಸಂಕಿರಣ ನಡೆಯಿತು. ಭಾರತೀಯ ರಿಸರ್ವ್ ಬ್ಯಾಂಕಿನ ನಿವೃತ್ತ ಉಪ ಗವರ್ನರ್ ಡಾ. ಕೆ. ಎಸ್. ಕೃಷ್ಣಸ್ವಾಮಿಯವರ ಅಧ್ಯಕ್ಷತೆ. ಖ್ಯಾತ ಸಾಹಿತಿಗಳೂ ರಿಸರ್ವ್ ಬ್ಯಾಂಕ್ ಕನ್ನಡ ಸಂಘದ ಸಂಸ್ಥಾಪಕ ಅಧ್ಯಕ್ಷರೂ ಆದ ಶ್ರೀ ಸೂ. ಸುಬ್ರಹ್ಮಣ್ಯಂ ಅವರು ತಮ್ಮ ವಿಶಿಷ್ಟ ಶೈಲಿಯಲ್ಲಿ ಕಾರ್ಯಕ್ರಮವನ್ನು ನಿರ್ದೇಶಿಸಿದರು.

ಭಾರತೀಯ ಕೈಗಾರಿಕಾಭಿವೃದ್ಧಿ ಬ್ಯಾಂಕಿನ ಬೆಂಗಳೂರು ಕಛೇರಿಯ ವ್ಯವಸ್ಥಾಪಕರಾದ ಶ್ರೀ ಪಿ. ಎಸ್. ಸುಬ್ರಹ್ಮಣ್ಯಂ ಅವರು 'ಕೈಗಾರಿಕಾಭಿವೃದ್ಧಿ ಮತ್ತು ವಾಣಿಜ್ಯ ಬ್ಯಾಂಕುಗಳು' ಎಂಬ ವಿಷಯದ ಬಗ್ಗೆ ತಿಳಿಗನ್ನಡದಲ್ಲಿ ಆಕರ್ಷಕವಾದ ಉಪನ್ಯಾಸ ನೀಡಿದರು. ಅನಂತರ ಕರ್ಣಾಟಕ ಬ್ಯಾಂಕ್ ಲಿಮಿಟೆಡ್‌ನ ಪ್ರಾದೇಶಿಕ ಅಭಿವೃದ್ಧಿ ವ್ಯವಸ್ಥಾಪಕರಾದ ಶ್ರೀ ಎನ್. ರಂಗನಾಥ್ ಅವರು 'ಅಭಿವೃದ್ಧಿ ಹಣಕಾಸು ಹಾಗೂ ವಾಣಿಜ್ಯ ಬ್ಯಾಂಕುಗಳು' ಎಂಬ ವಿಷಯದ ಮೇಲೆ ಸರಳವಾದ ಶೈಲಿಯಲ್ಲಿ ಉಪನ್ಯಾಸ ನೀಡಿದರು.

ಆಮೇಲೆ ಉಪನ್ಯಾಸ ನೀಡಿದವರು ವಿಜಯ ಬ್ಯಾಂಕಿನ ಮುಖ್ಯ ವ್ಯವಸ್ಥಾಪಕರಾದ ಡಾ. ಕೆ. ಶಂಕರ್ ಶೆಟ್ಟಿ. ಅವರು ಆರಿಸಿಕೊಂಡಿದ್ದ ವಿಷಯ 'ಜನತೆಗಾಗಿ ಬ್ಯಾಂಕಿಂಗ್'. ತಾವು ಕರ್ನಾಟಕದಿಂದ ಚಿರಕಾಲ ದೂರವಿದ್ದುದರಿಂದ ತಮ್ಮ ಭಾಷೆಯಲ್ಲಿ ತಪ್ಪುಗಳಿರಬಹುದೆಂದು ಆರಂಭಿಸಿದ ಅವರು ಮನೋರಂಜಕ ಶೈಲಿಯ ಭಾಷಣದಿಂದ ಸಭಿಕರ ಮನಗಳನ್ನು ಗೆದ್ದರು. ಜನತೆಗಾಗಿ ಬ್ಯಾಂಕುಗಳು ಇಲ್ಲಿಯವರೆಗೆ ಏನೇನು ಮಾಡಿವೆ, ಇನ್ನು ಮಾಡಬೇಕಾಗಿರುವುದೇನು ಎಂಬುದನ್ನು ಮನಮುಟ್ಟುವಂತೆ ನಿರೂಪಿಸಿದರು.

ಈ ಮೂರು ಉಪನ್ಯಾಸಗಳ ಅನಂತರ ಸಭಿಕರು ಕೇಳಿದ ಪ್ರಶ್ನೆಗಳಿಗೆ ಆಯಾ ಉಪನ್ಯಾಸಕರು ಸೂಕ್ತ ಉತ್ತರಗಳನ್ನು ನೀಡಿದರು.

ಅನಂತರ ಶ್ರೀ ಕೃಷ್ಣಸ್ವಾಮಿಯವರು ಈ ಮೂರು ಉಪನ್ಯಾಸಗಳ ಮುಖ್ಯಾಂಶಗಳನ್ನು ತಮ್ಮ ಅಧ್ಯಕ್ಷ ಭಾಷಣದಲ್ಲಿ ಎತ್ತಿ ಹೇಳಿ, ಬ್ಯಾಂಕಿಂಗ್ ಕ್ಷೇತ್ರಕ್ಕೆ ಸಂಬಂಧಿಸಿದಂತೆ ನಮ್ಮ ದೇಶದಲ್ಲಿ ಇರಬೇಕಾದ ಭವಿಷ್ಯದ ಮುನ್ನೋಟದತ್ತ ಸಭಿಕರ ಗಮನ ಸೆಳೆದರು. ಬ್ಯಾಂಕಿಂಗಿನಂಥ ವಿಷಯದ ಕುರಿತಾದ ಉಪನ್ಯಾಸಗಳು ಹೇಗೆ ಇರಬೇಕೆಂಬುದಕ್ಕೆ ಅವರ ಲಲಿತವಾದ ಕನ್ನಡ ಭಾಷಣ ಒಂದು ಮಾದರಿಯಾಗಿತ್ತು.

ಪ್ರಾರಂಭದಲ್ಲಿ ಶ್ರೀ ವಿ. ಆರ್. ಪೋತದಾರ್ ಅವರು ಸ್ವಾಗತಿಸಿದರು. ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳ ಸಮನ್ವಯ ಸಮಿತಿಯ ಪ್ರಧಾನ ಕಾರ್ಯದರ್ಶಿ ಶ್ರೀ ಪಾ. ರಾಜಗೋಪಾಲ್ ಅವರು ವಂದನಾರ್ಪಣೆ ಮಾಡಿದರು. ಈ ಸಂಕಿರಣದ ಉಪನ್ಯಾಸಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸುವ ಇಂಗಿತವನ್ನು ಅವರು ನೀಡಿದರು.

ಸುಮಾರು ಎರಡೂವರೆ ಗಂಟೆಗಳ ಕಾಲ ನಡೆದ ವಿಚಾರ ಸಂಕಿರಣದಲ್ಲಿಯ ಉಪನ್ಯಾಸಗಳು, ಸಭಿಕರು ಇವುಗಳಲ್ಲಿ ಆಸಕ್ತಿಯಿಂದ ಭಾಗವಹಿಸಿದ ಕುರುಹಾಗಿ ಅನಂತರ ನಡೆದ ಪ್ರಶ್ನೋತ್ತರ—ಇವುಗಳಿಂದ ಒಂದು ವಿಚಾರವಂತೂ ಸಿದ್ಧವಾಯಿತು. ಎಂಥ ವಿಷಯವನ್ನೇ ಆಗಲಿ ಕನ್ನಡದಲ್ಲಿ ಸಮರ್ಥವಾಗಿ ಅಭಿವ್ಯಕ್ತಿಸಬಹುದೆಂಬ ಭಾವನೆ ಮೂಡಿತು.

ವಿಚಾರ ಸಂಕಿರಣದ ಯಶಸ್ಸು ಸಂಘಟಕರಿಗೆ ತೃಪ್ತಿ ಸಂತೋಷಗಳನ್ನು ತಂದಿತು.

ಯಾವಾಗ ಎಲ್ಲಿ ಆಡಿದ ಮಾತು ಎಲ್ಲಿ ಎಂಥ ಪ್ರಭಾವ ಬೀರೀತು ಎಂಬುದು ಅನೂಹ್ಯ. ಸಂಕಿರಣದಲ್ಲಿ ಶ್ರೀ ಸೂ. ಸುಬ್ರಹ್ಮಣ್ಯಂ ಅವರು ಡಾ. ಶಂಕರ್ ಶೆಟ್ಟಿರನ್ನು ಪರಿಚಯಿಸುತ್ತ 'ಇವರು ಮುಂಬಯಿಯಲ್ಲಿದ್ದಾಗ ಕನ್ನಡ ಸಂಘವನ್ನು ಕಟ್ಟಿ ಬೆಳೆಸಿದರು' ಎಂಬ ಮಾತನ್ನು ಪ್ರಾಸ್ತಾವಿಕವಾಗಿ ಆಡಿದರು. ಸಭೆಗೆ ಬಂದಿದ್ದ ವಿಜಯ ಬ್ಯಾಂಕಿನ ಕನ್ನಡ ಅಭಿಮಾನಿಗಳ ಮನಸ್ಸಿನಲ್ಲಿ ಈ ಮಾತು ಬೀಜಾವಾಪನೆಗೊಂಡು, ಮೊಳಕೆಯೊಡೆದು ಇತ್ತೀಚೆಗೆ ಡಾ. ಶಂಕರ್ ಶೆಟ್ಟರ ಅಧ್ಯಕ್ಷತೆಯಲ್ಲಿ 'ವಿಜಯ ಬ್ಯಾಂಕ್ ಕನ್ನಡ ಸಂಘ' ಎಂಬ ಗಿಡವಾಗಿ ಬೆಳೆಯಲಾರಂಭಿಸಿರುವುದು ಸಂತೋಷದ ಸಂಗತಿ.

# ಹೊಸ ಹೆಜ್ಜೆಗಾಗಿ ಸಿದ್ಧತೆ: ಕನ್ನಡದಲ್ಲಿ ಬ್ಯಾಂಕಿಂಗ್ ಕಮ್ಮಟ

**ಸಾ. ಅ. ಮಂಜುನಾಥ**

ಬ್ಯಾಂಕಿಂಗ್ ಕುರಿತಾದ ಲೇಖನಗಳೂ ಗ್ರಂಥಗಳೂ ನಮಗೆ ಹೆಚ್ಚಾಗಿ ಸಿಗುವುದು ಇಂಗ್ಲಿಷಿನಲ್ಲಿಯೆ. ಬ್ಯಾಂಕಿಂಗ್ ಎನ್ನುವುದು ಜನಸಾಮಾನ್ಯರೊಡನೆ ನಡೆವ ವ್ಯವಹಾರ. ಆದ್ದರಿಂದ ಈ ವಿಷಯದ ಬಗ್ಗೆ ಲೇಖನಗಳೂ ಗ್ರಂಥಗಳೂ ಕನ್ನಡದಲ್ಲಿ ಹೊರಬರುವುದೂ, ಬ್ಯಾಂಕಿಂಗ್ ವ್ಯವಹಾರದಲ್ಲಿ ಕನ್ನಡದ ಬಳಕೆ ಹೆಚ್ಚುವುದೂ ಅತ್ಯಂತ ಅಗತ್ಯ ಎಂಬುದನ್ನರಿತ ಕೆಲವು ಉತ್ಸಾಹಿ ಬ್ಯಾಂಕ್ ನೌಕರರು ಹಾಗೂ ಅಧಿಕಾರಿಗಳು ಬ್ಯಾಂಕಿಂಗ್ ವಿಷಯ ಕುರಿತಾದ ಲೇಖನಗಳನ್ನು ಕನ್ನಡದಲ್ಲೂ ಬರೆಯತೊಡಗಿದರು. ಈ ಲೇಖನಗಳಲ್ಲಿ ಹಲವು ಬೆಳಕು ಕಾಣಲು 'ಬ್ಯಾಂಕಿಂಗ್ ಪ್ರಪಂಚ' ನೆರವಾಯಿತು. ತಮ್ಮ ಲೇಖನ ಕಲೆಯನ್ನು ಪ್ರಾವೀಣ್ಯದ ಮಟ್ಟಕ್ಕೆ ಒಯ್ಯಬೇಕು; ಸಮೃದ್ಧವಾದ ಬ್ಯಾಂಕಿಂಗ್ ಸಾಹಿತ್ಯ ಇರುವ ಇಂಗ್ಲಿಷ್‌ನಿಂದ ಸೂಕ್ತವಾದುದನ್ನೂ ಅಗತ್ಯವಾದುದನ್ನೂ ಕನ್ನಡಕ್ಕೆ ತರಬೇಕು; ಕನ್ನಡದಲ್ಲಿ ತಾವು ಇಡುವ ಹೊಸ ಹೆಜ್ಜೆ ಭದ್ರವಾದ ನೆಲದ ಮೇಲೆ ಇಟ್ಟ ಶಕ್ತಿಯುತವಾದ ಹೆಜ್ಜೆಯಾಗಬೇಕು ಎಂಬ ಅಭೀಪ್ಸೆ ಈ ಎಲ್ಲಾ ಬರಹಗಾರರಿಗೂ ಇತ್ತು. ಇದಕ್ಕೆ ಸಮರ್ಥರ ಮಾರ್ಗದರ್ಶನ ಅಗತ್ಯ ಎಂಬ ಅರಿವೂ ಅವರಿಗಿತ್ತು. ಇದನ್ನು ಅರಿತ ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳ ಸಮನ್ವಯ ಸಮಿತಿ ಇವರ ಯೋಚನೆಗಳಿಗೆ ಮೂರ್ತ ಸ್ವರೂಪ ನೀಡುವ ಪ್ರಯತ್ನ ಮಾಡಿತು. ಅದರ ಫಲವೇ ಮೈಸೂರಿನಲ್ಲಿ ಏಪ್ರಿಲ್ 6ರಿಂದ 9ರ ವರೆಗೆ ನಡೆದ ಬ್ಯಾಂಕಿಂಗ್ ಸಾಹಿತ್ಯ ಕುರಿತಾದ ಶಿಬಿರ.

ಪ್ರಶಾಂತ ಮೈಸೂರಿನ ಪ್ರಶಾಂತವಾದೊಂದು ಭವನದಲ್ಲಿ ನಾಲ್ಕು ದಿನಗಳ ಕಾಲ ನಡೆದ ಈ ಶಿಬಿರದ ಮಾರ್ಗದರ್ಶನವನ್ನು ಪ್ರೊ. ಎಚ್ಚೆಸ್ಕೆ ಅವರು ಮಾಡಿದರು. ದೂರದ ಸಿಂದಗಿಯಿಂದ ಬಂದಿದ್ದ ಅಭ್ಯರ್ಥಿ, ಸ್ಟೇಟ್ ಬ್ಯಾಂಕಿನ ಅಧಿಕಾರಿ ಶ್ರೀ ಮೇ. ಕೃ. ಅನಂತಸ್ವಾಮಿ ಅವರ ಸ್ವಾಗತದೊಡನೆ ಶಿಬಿರ 6–4–1982ರಂದು ಆರಂಭವಾಯಿತು. ಮೊದಲು ಬ್ಯಾಂಕಿಂಗ್ ವಿಷಯಗಳ ಕುರಿತಾದ ಪ್ರಬಂಧ ರಚನೆಯ ವಿಷಯವನ್ನು ಎತ್ತಿಕೊಳ್ಳಲಾಯಿತು. ಪ್ರಬಂಧ ಲೇಖನದಲ್ಲಿ ಅನುಸರಿಸಬೇಕಾದ ಸೂತ್ರಗಳನ್ನು, ಒಂದು ಪ್ರಬಂಧ ಸಫಲವೇ ಅಲ್ಲವೇ ಎಂಬ ನಿರ್ಣಯ ನೀಡಲು ಅನುಸರಿಸಬೇಕಾದ ಸೂತ್ರಗಳನ್ನು ಪ್ರೊ. ಎಚ್ಚೆಸ್ಕೆಯವರು ಸಂಕ್ಷೇಪವಾಗಿ ಸರಳವಾದ ಶೈಲಿಯಲ್ಲಿ ತಿಳಿಸಿದರು. ಅನಂತರ ಶಿಬಿರದಲ್ಲಿ ಭಾಗವಹಿಸಿದ ಅಭ್ಯರ್ಥಿಗಳು ಮಂಡಿಸಿದ ಪ್ರಬಂಧಗಳನ್ನು ಒಂದೊಂದಾಗಿ ಪರಿಶೀಲನೆಗೆ ತೆಗೆದುಕೊಂಡು, ಅವುಗಳ ಮೌಲ್ಯನಿರ್ಣಯ, ಪ್ರಬಂಧಗಳು ಇನ್ನೂ ಉತ್ತಮಗೊಳ್ಳಲು ಮಾಡಬೇಕಾದ ಮಾರ್ಪಾಡುಗಳು ಇವನ್ನು ವಿವರವಾಗಿ ಚರ್ಚಿಸಲಾಯಿತು. ಅಭ್ಯರ್ಥಿಗಳು ಮತ್ತು ಮಾರ್ಗದರ್ಶಕರು ಸಮಾನಾಸಕ್ತಿಯಿಂದ ನಡೆಸಿದ ಚರ್ಚೆಗಳ ಪರಿಣಾಮವಾಗಿ ಸಫಲ ಪ್ರಬಂಧವೊಂದು ಎಂತಿರಬೇಕೆಂಬುದು ಎಲ್ಲರಿಗೂ ಸ್ಪಷ್ಟವಾಯಿತು. ಗುರುವಾರ, 1982ರ ಏಪ್ರಿಲ್ 8ರ ಮಧ್ಯಾಹ್ನದ ವರೆಗೆ, ನಡೆದ ಪ್ರಬಂಧಗಳ ಪರಿಶೀಲನೆಯಲ್ಲಿ ಒಟ್ಟು 11 ಪ್ರಬಂಧಗಳು ಮಂಡಿಸಲ್ಪಟ್ಟವು.

8ನೆಯ ತಾರೀಖು ಗುರುವಾರ ಮಧ್ಯಾಹ್ನದ ಅನಂತರ ಶಿಬಿರದ ಎರಡನೆಯ ಮುಖ್ಯ ಕಾರ್ಯಕ್ರಮ ಆರಂಭವಾಗಿ ಶುಕ್ರವಾರ ಸಂಜೆಯ ವರೆಗೆ ನಡೆಯಿತು. ಅದೆಂದರೆ ಬ್ಯಾಂಕಿಂಗ್ ಸಾಹಿತ್ಯವನ್ನು ಇಂಗ್ಲಿಷಿನಿಂದ ಕನ್ನಡಕ್ಕೆ ಭಾಷಾಂತರಿಸುವ ಕಲೆಯ ಅಧ್ಯಯನ. ಆರಂಭದಲ್ಲಿ ಪ್ರೊ. ಎಚ್ಚೆಸ್ಕೆಯವರು ಭಾಷಾಂತರದ ಮೂಲತತ್ವಗಳನ್ನು ವಿವರಿಸಿದರು. ಅನಂತರ ಶಿಬಿರದ ಅಭ್ಯರ್ಥಿಗಳು ಇಂಗ್ಲಿಷಿನಿಂದ ಭಾಷಾಂತರಿಸಿದ್ದ ಬ್ಯಾಂಕಿಂಗ್ ವಿಷಯದ ಮೂಲಗಳೊಡನೆ ಪರಿಶೀಲಿಸಿ ಚರ್ಚಿಸಲಾಯಿತು. ಹತ್ತು ಮಂದಿ ಅಭ್ಯರ್ಥಿಗಳು ತಾವು ಭಾಷಾಂತರಿಸಿದ ಲೇಖನಗಳನ್ನು ಮಂಡಿಸಿದರು. ಭಾಷಾಂತರ ಎಂಥ ಕಠಿಣವಾದ ಕಾರ್ಯ, ಪರಕಾಯ ಪ್ರವೇಶದಂತಹ ಅದ್ಭುತ ಕಾರ್ಯ ಎಂಬ ವಿಷಯವೂ, ಮೂಲ ಭಾಷೆಗೂ ಲಕ್ಷ್ಯ ಭಾಷೆಗೂ ಇರುವ ಅದರದರ ಜಾಯಮಾನಗಳಿಗನುಗುಣವಾಗಿ ಹೇಗೆ ವಾಕ್ಯಗಳ ಕಟ್ಟಡ ನಿರ್ಮಾಣವಾಗಬೇಕು ಎಂಬ ವಿಷಯವೂ ಲೇಖನಗಳ ಪರಿಶೀಲನೆಯ ವೇಳೆಯಲ್ಲಿ ಮನದಟ್ಟಾದುವು.

ಬ್ಯಾಂಕಿಂಗಿನಂಥ ನೀರಸವೆನಿಸಬಹುದಾದ (ಅದು ನೀರಸ ವಲ್ಲ—ಸಂ.) ವಿಷಯದಲ್ಲಿ ಶಿಬಿರ ಹೇಗೆ ನಡೆದೀತು ಎಂಬುದು ಶಿಬಿರದ ಅಭ್ಯರ್ಥಿಗಳಿಗಿದ್ದ ಸಂಶಯ. ಮಾರ್ಗ ದರ್ಶಕರೂ ಅಭ್ಯರ್ಥಿಗಳೂ ಕಲೆತು ಸರಸ ಶೈಲಿಯಲ್ಲಿ ನಡೆಸಿದ ಶಿಬಿರದಿಂದ ದೊರೆತ ಅನುಭವ ಅಗಾಧ. ವಿಷಯ ಎಷ್ಟೇ ನೀರಸವಾದರೂ ಅದನ್ನು ಪ್ರಸ್ತುತಪಡಿಸುವ ಶೈಲಿಯಲ್ಲಿ ಸ್ವಾರಸ್ಯ ಇರುವುದು ಸಾಧ್ಯ ಎಂಬ ಸಂಗತಿ ಮನದಟ್ಟಾಯಿತಲ್ಲದೆ, ಇಂಥ ಶಿಬಿರಗಳು ಇನ್ನೂ ಹೆಚ್ಚು ನಡೆಯಬೇಕೆಂಬ ಆಸೆ ಆಸಕ್ತಿಗಳು ಮೂಡಿದುವು. ಅಭ್ಯರ್ಥಿ ಗಳ ಪಾಲಿಗೆ ಶಿಬಿರ ಅವರ ಜೀವನದಲ್ಲಿಯ ಮರೆಯ ಲಾಗದ ಅನುಭವಗಳಲ್ಲೊಂದಾಯಿತು.

ಶಿಬಿರದಲ್ಲಿ ಮಾರ್ಗದರ್ಶನ ನೀಡಿದ ಪ್ರೊ. ಎಚ್ಚೆಸ್ಕೆ ಯವರಿಗೆ ಅಭ್ಯರ್ಥಿಗಳು ಅರ್ಪಿಸಿದ ವಂದನೆಗಳಿಗೆ ನೀಡಿದ ಉತ್ತರದಲ್ಲಿ ಅವರು ತಾವು ಬೋಧಕರಾಗಿದ್ದ ದಿನಗಳನ್ನು ಮರಳಿಸಿಕೊಟ್ಟದ್ದಕ್ಕಾಗಿ ಅಭ್ಯರ್ಥಿಗಳಿಗೆ ಕೃತಜ್ಞರಾಗಿರು ವುದಾಗಿಯೂ, ತಮಗೆ ಶಿಬಿರದ ಅನುಭವದಿಂದ ತಾರುಣ್ಯ ಮರಳಿ ಬಂದಂತೆ ಎನಿಸಿದೆಯೆಂದೂ ಹೃದಯ ಬಿಚ್ಚಿ ನುಡಿದರು.

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಈ ಶಿಬಿರ ದಲ್ಲಿ ಆಸಕ್ತಿ ವಹಿಸಿ ತನ್ನ ಸಹ ನಿರ್ದೇಶಕರಾದ ಶ್ರೀ ಟಿ. ಎನ್. ದಕ್ಷಿಣಾಮೂರ್ತಿಯವರನ್ನು ಶಿಬಿರದಲ್ಲಿ ಭಾಗವಹಿಸಲು ನಿಯೋಜಿಸಿತ್ತು. ಶ್ರೀ ದಕ್ಷಿಣಾಮೂರ್ತಿಯವರು ಬ್ಯಾಂಕಿಂಗ್ ಕ್ಷೇತ್ರದಲ್ಲಿ ಕನ್ನಡದ ಬಳಕೆ ಹೆಚ್ಚಿಸುವ ವಿಧಿವಿಧಾನಗಳನ್ನು ಕುರಿತು ಅಭ್ಯರ್ಥಿಗಳೊಡನೆ ಸಮಾಲೋಚಿಸಿದರು.

— o —

## ಸಮನ್ವಯ ಸಮಿತಿ

ಅಧ್ಯಕ್ಷ :
ಎಸ್. ಶ್ರೀಧರ

ಉಪಾಧ್ಯಕ್ಷರು :
ಮು. ಮಲ್ಲಿಕಾರ್ಜುನ
ಮೇ. ಕೃ. ಅನಂತಸ್ವಾಮಿ

ಪ್ರಧಾನ ಕಾರ್ಯದರ್ಶಿಗಳು :
ಪಾ. ರಾಜಗೋಪಾಲ
ಚೋ. ನಂಜಪ್ಪ

ಸಹ ಕಾರ್ಯದರ್ಶಿಗಳು :
ಎಲ್. ಉಮಾಶಂಕರ್
ಚಿ. ರಾ. ವೇಣುಗೋಪಾಲ್

ಖಜಾಂಚಿ :
ಕ. ನ. ಜಯರಾಮ

ಆಂತರಿಕ ಲೆಕ್ಕ ಪರಿಶೋಧಕ :
ಎಂ. ಸಿ. ಕಣ್ಣನ್

ವಾರ್ಷಿಕ ಚಂದಾ ರೂ. ೫/-
ಆಜೀವ ಚಂದಾ ರೂ. ೧೦೦/-

# ವಿಜಯಾ ಬ್ಯಾಂಕ್ ನಡೆದು ಬಂದ ದಾರಿ

ಡಾ॥ ಕೆ. ಶಂಕರ ಶೆಟ್ಟಿ

ಬ್ಯಾಂಕಿಂಗ್ ಚರಿತ್ರೆಯಲ್ಲಿ ವಿಜಯಾ ಬ್ಯಾಂಕಿಗೆ ತನ್ನದೇ ಆದ ಒಂದು ವೈಶಿಷ್ಟ್ಯವಿದೆ. ಕೃಷಿಕ ಸಮಾಜದವರಿಂದ ಕೃಷಿಕರ ಏಳಿಗೆಗಾಗಿ ಸ್ಥಾಪಿತವಾದ ಬ್ಯಾಂಕುಗಳಲ್ಲಿ ಈ ಬ್ಯಾಂಕಿಗೆ ಅಗ್ರಸ್ಥಾನ ಸಲ್ಲಬೇಕು. ಜನ್ಮದಿಂದ ಪಡೆದ ಗ್ರಾಮೀಣ ಸಂಸ್ಕೃತಿಯನ್ನು 50 ವರ್ಷಗಳ ಅನಂತರವೂ ಅದು ಕಾಪಾಡಿಕೊಂಡು ಬಂದು ಜನರ ಸೇವೆ ಮಾಡುತ್ತಿದೆ.

## ಸ್ಥಾಪನೆ

ಪ್ರಪಂಚದ ಮಹಾ ಆರ್ಥಿಕ ಬಿಕ್ಕಟ್ಟಿನ ಸಮಯದಲ್ಲಿ—ಆರ್ಥಿಕ ರಂಗದಲ್ಲಿ ಭಯಂಕರ ಸ್ಫೋಟನೆಯಾದ 1931ರಲ್ಲಿ—ವಿಜಯಾ ಬ್ಯಾಂಕು ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರಿನಲ್ಲಿ ಸ್ಥಾಪಿತವಾಯಿತು. ಮೂಲ ಬಂಡವಾಳ ಕೇವಲ ರೂ. 8,670/-. ಈ ಅಲ್ಪ ಮೊತ್ತದ ಬುನಾದಿಯ ಮೇಲೆ ನಿರ್ಮಿತವಾದ ವಿಜಯಾ ಬ್ಯಾಂಕು ಇಂದು ರಾಷ್ಟ್ರೀಕರಣಗೊಂಡು 600ಕ್ಕೂ ಮಿಕ್ಕಿದ ಶಾಖೆಗಳ ಮೂಲಕ ದೇಶದ 20 ರಾಜ್ಯಗಳಲ್ಲಿ ಹಾಗೂ 5 ಕೇಂದ್ರಾಡಳಿತ ಪ್ರದೇಶಗಳಲ್ಲಿ ಸೇವೆ ಸಲ್ಲಿಸುತ್ತಿದೆ.

## ಬೆಳವಣಿಗೆ

ಆರಂಭದಲ್ಲಿ ವಿಜಯಾ ಬ್ಯಾಂಕು ಹೆಚ್ಚಾಗಿ ದಕ್ಷಿಣ ಕನ್ನಡ ಜಿಲ್ಲೆಯಲ್ಲೇ ತನ್ನ ವ್ಯವಹಾರವನ್ನು ಮುಂದುವರಿಸಿತ್ತು. 1941ರ ಅನಂತರ ಪ್ರಥಮವಾಗಿ ಮುಂಬಯಿಯಲ್ಲಿ ಒಂದು ಶಾಖೆ ತೆರೆಯಿತು. ಆ ವರ್ಷ ಬ್ಯಾಂಕಿನ ಬಂಡವಾಳ ರೂ. 66 ಸಾವಿರವನ್ನೂ ಠೇವಣಿ ರೂ. 4 ಲಕ್ಷವನ್ನೂ ತಲುಪಿದ್ದುವು. 1951ರ ಸುಮಾರಿಗೆ ಬಂಡವಾಳ ರೂ. 7½ ಲಕ್ಷವನ್ನೂ ಠೇವಣಿ ರೂ. 41 ಲಕ್ಷವನ್ನೂ ಮುಟ್ಟಿದುವು. ಆದರೂ, ಬ್ಯಾಂಕಿನ ಅಭಿವೃದ್ಧಿ ಅಷ್ಟೇನೂ ಶೀಘ್ರಗತಿಯಲ್ಲಿ ಸಾಗಲಿಲ್ಲ. ಪ್ರಾರಂಭದಿಂದಲೂ ಬ್ಯಾಂಕಿನ ಅಧ್ಯಕ್ಷರಾಗಿದ್ದ ಶ್ರೀ ಎ. ಬಿ. ಶೆಟ್ಟಿಯವರು ಮದ್ರಾಸು ಸರಕಾರದಲ್ಲಿ ಸಚಿವರಾಗಿ ನೇಮಕಗೊಂಡ ಅನಂತರ ಸರ್ವಶ್ರೀ ಬಿ. ಮಂಜಯ್ಯ ಹೆಗ್ಡೆ (16 ವರ್ಷ), ಕೆ. ಸುಂದರರಾಮ ಶೆಟ್ಟಿ (7 ವರ್ಷ) ಮತ್ತು ಡಾ॥ ಬಾಲಪ್ಪ ಶೆಟ್ಟಿ (1 ವರ್ಷ) ಬ್ಯಾಂಕಿನ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. 1957ರಲ್ಲಿ ಬ್ಯಾಂಕಿನ ಬೆಳ್ಳಿ ಹಬ್ಬವನ್ನು ಆಚರಿಸಿದ ಸುಸಂದರ್ಭದಲ್ಲಿ ಬ್ಯಾಂಕು ತನ್ನದೇ ಆದ ಹೊಸ ಕಟ್ಟಡವನ್ನು ಮಂಗಳೂರಿನಲ್ಲಿ ನಿರ್ಮಿಸಿಕೊಂಡಿತು.

## ಸತ್ವ ಪರೀಕ್ಷೆ

ಬ್ಯಾಂಕಿನ ಬೆಳವಣಿಗೆ ನಿಯಮಾನುಸಾರ ನಡೆದರೂ, ಗತಿ ಕುಂಠಿತವಾಗಿತ್ತು. ಸಂಸ್ಥೆ ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗಿತ್ತು. ಸ್ವಾತಂತ್ರ್ಯ ಸಿಕ್ಕಿದ ಅನಂತರ ಭಾರತೀಯ ಬ್ಯಾಂಕಿಂಗ್ ಕ್ಷೇತ್ರದಲ್ಲಿ ತೀವ್ರ ಬದಲಾವಣೆ ಉಂಟಾಗಿ, ಬ್ಯಾಂಕುಗಳು ತಮ್ಮತಮ್ಮೊಳಗೆ ಪೈಪೋಟಿ ನಡೆಸಲು ಆರಂಭಿಸಿದವು. ಹೆಚ್ಚಿನ ಸಂಖ್ಯೆಯಲ್ಲಿ ಔದ್ಯೋಗಿಕ ಹಾಗೂ ಕೃಷಿ ಕ್ಷೇತ್ರಗಳಿಂದ ಸಾಲಕ್ಕಾಗಿ ಬೇಡಿಕೆಗಳು ಬರಲಾರಂಭಿಸಿದವು. ಸರಕಾರದ ರೀತಿ, ನೀತಿ, ರಿಸರ್ವ್ ಬ್ಯಾಂಕಿನ ಕಾನೂನು, ಇವೆಲ್ಲವುಗಳಿಗೆ ಅನುಗುಣವಾಗಿ ಬ್ಯಾಂಕುಗಳು ಕಾರ್ಯವೆಸಗಬೇಕಾಗಿತ್ತು. ಈ ರೀತಿ ಬದಲಾವಣೆಗಳು ಆಗುತ್ತಿರುವಾಗ ವಿಜಯಾ ಬ್ಯಾಂಕಿನಲ್ಲಿ ಮಾತ್ರ ತಕ್ಕ ಮುಖಂಡತ್ವ ದೊರೆಯಲಿಲ್ಲ. ಅಧ್ಯಕ್ಷರುಗಳು ಗೌರವ ಹುದ್ದೆಯಲ್ಲಿದ್ದು, ತಮ್ಮ ಅಷ್ಟಿಷ್ಟು ಸಮಯವನ್ನು ಮಾತ್ರ ಬ್ಯಾಂಕಿನ ಬಗ್ಗೆ ವಿನಿಯೋಗಿಸಬಹುದಾಗಿತ್ತೇ ವಿನಾ, ಸಂಪೂರ್ಣ ಗಮನವನ್ನು ಕೊಡಲು ಸಾಧ್ಯವಾಗುತ್ತಿರಲಿಲ್ಲ. ಪರಿಣಾಮವಾಗಿ ಆಡಳಿತದಲ್ಲಿ ಸಡಿಲುತನ ತನ್ನಿಂದಾಗಿಯೇ ಬೇರು ಬಿಟ್ಟು ಬೆಳೆಯಿತು. ಈ ಸಂದಿಗ್ಧ ಪರಿಸ್ಥಿತಿಯಲ್ಲಿ 1958-59ರ ಸುಮಾರಿಗೆ ಬ್ಯಾಂಕಿನ ಮುಂಬಯಿ ಶಾಖೆಯೊಂದರಲ್ಲಿ ನಡೆದ ವಂಚನೆಯಿಂದಾಗಿ ಬ್ಯಾಂಕಿನ ಭದ್ರತೆಗೆ ಧಕ್ಕೆ ಬಂದಿತ್ತು. ಬ್ಯಾಂಕನ್ನು ಮುಚ್ಚಬೇಕಾದೀತೋ ಎಂಬ ಭಯದ ಕಾರ್ಮುಗಿಲು ಎಲ್ಲೆಡೆ ಹಬ್ಬಿತ್ತು.

## ವಿಲೀನೀಕರಣ

ಈ ವಿಷಮ ಪರಿಸ್ಥಿತಿಯಲ್ಲಿ ಶ್ರೀ ಮೂಲ್ಕಿ ಸುಂದರರಾಮ ಶೆಟ್ಟಿಯವರು ಬ್ಯಾಂಕಿನ ಅಧ್ಯಕ್ಷಪದವನ್ನು ವಹಿಸಿಕೊಂಡರು. ಯಾವ ಪರಿಸ್ಥಿತಿಯಲ್ಲೂ ಬ್ಯಾಂಕನ್ನು ಮುಚ್ಚುವ, ಇಲ್ಲವೇ ಇತರ ದೊಡ್ಡ ಬ್ಯಾಂಕಿನೊಂದಿಗೆ ವಿಲೀನೀಕರಣಗೊಳಿಸುವ ಪ್ರಶ್ನೆಯೇ ಇಲ್ಲವೆಂದು ಅವರು ಘೋಷಿಸಿ, 1962-67ರ ಅಂತರದಲ್ಲಿ ಇತರ 9 ಬ್ಯಾಂಕುಗಳನ್ನು ವಿಜಯಾ ಬ್ಯಾಂಕಿನೊಂದಿಗೆ ವಿಲೀನೀಕರಣಗೊಳಿಸಿದರು.

ಕರ್ಣಾಟಕದ ಬ್ಯಾಂಕಿಂಗ್ ಚರಿತ್ರೆಯಲ್ಲಿ ಇದೊಂದು ಮಹಾ ಕ್ರಾಂತಿ. ಯಾವ ಬ್ಯಾಂಕು ಹೇಳಹೆಸರಿಲ್ಲದೆ ಇತರ ಬ್ಯಾಂಕಿನೊಂದಿಗೆ ವಿಲೀನಗೊಳ್ಳಬೇಕಾಗಿತ್ತೋ ಆ ಬ್ಯಾಂಕು ಇತರ ಚಿಕ್ಕಪುಟ್ಟ ಬ್ಯಾಂಕುಗಳನ್ನು ತನ್ನೊಂದಿಗೆ ವಿಲೀನಗೊಳಿಸಿಕೊಂಡ ವಿಜಯ ಯಾತ್ರೆಯ ಚರಿತ್ರೆ ಅದ್ಭುತವೆಂದರೂ ತಪ್ಪಾಗಲಾರದು.

ವಿಲೀನೀಕರಣಗೊಂಡ ಬ್ಯಾಂಕುಗಳ ವಿವರ ಹೀಗಿದೆ:

1. ದೇವಾಂಗ ಬ್ಯಾಂಕು
2. ದಕ್ಷಿಣ ಭಾರತ್ ಬ್ಯಾಂಕು
3. ಚೆಲಪುರಮ್ ಬ್ಯಾಂಕು
4. ತಾಲಿಪರಾಂಬ ಬ್ಯಾಂಕು
5. ತಲಿಚ್ಚೇರಿ ಬ್ಯಾಂಕು
6. ವೈಶ್ಯ ಮರ್ಕಂಟೈಲ್ ಬ್ಯಾಂಕು
7. ಕೂನೂರು ಸುಬ್ರಹ್ಮಣ್ಯ ವಿಲಾಸ ಉಪಕಾರ ಬ್ಯಾಂಕು
8. ಹುಬ್ಬಳ್ಳಿ ಸಿಟಿ ಬ್ಯಾಂಕು
9. ಜಯಲಕ್ಷ್ಮಿ ಬ್ಯಾಂಕು

### ದಿಗ್ವಿಜಯ

1961ರಲ್ಲಿ 21 ಶಾಖೆಗಳಲ್ಲಿ 159ಮಂದಿ ಸಿಬ್ಬಂದಿ ಇದ್ದರು ಮತ್ತು ರೂ. 1.44 ಕೋಟಿ ಠೇವಣಿ ಈ ಬ್ಯಾಂಕಿನಲ್ಲಿತ್ತು. ಆದರೆ 1969ರಲ್ಲಿ ಠೇವಣಿ ರೂ. 13.21 ಕೋಟಿ ಮುಟ್ಟಿತು. 1969ರಲ್ಲಿ ಬ್ಯಾಂಕಿನ ಆಡಳಿತ ಕಛೇರಿಯನ್ನು ಬೆಂಗಳೂರಿಗೆ ವರ್ಗಾಯಿಸಲಾಯಿತು. 1969ರಿಂದ ವಿಜಯಾ ಬ್ಯಾಂಕಿನ ಚರಿತ್ರೆ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಸರ್ವಸಾಧಾರಣವಾಗಿ ದಿಗ್ವಿಜಯವನ್ನೇ ಮಾಡಿತು ಎಂದರೂ ತಪ್ಪಾಗಲಾರದು.

### ಸುವರ್ಣ ವರ್ಷ

1969ರಿಂದ 1976ರ ವರೆಗಿನ ವಿಜಯಾ ಬ್ಯಾಂಕಿನ ಚರಿತ್ರೆಯನ್ನು ಸುವರ್ಣ ಕಾಲವೆಂದೇ ಕರೆಯಬೇಕು. ಬ್ಯಾಂಕಿಂಗ್ ಚರಿತ್ರೆಯಲ್ಲಿ ಇಷ್ಟೊಂದು ಶೀಘ್ರ ರೀತಿಯಲ್ಲಿ ಸರ್ವತೋಮುಖ ಅಭಿವೃದ್ಧಿಯನ್ನು ಗಳಿಸಿದ ಸಂಸ್ಥೆಗಳಲ್ಲಿ ಈ ಬ್ಯಾಂಕಿಗೆ ಅಗ್ರಸ್ಥಾನವಿದೆ. ಶ್ರೀ ಸುಂದರ ರಾಮ ಶೆಟ್ಟಿಯವರು 1969ರಲ್ಲಿ ಬ್ಯಾಂಕಿನ ಪೂರ್ಣಾವಧಿ ಅಧ್ಯಕ್ಷರಾಗಿಯೂ ಮುಖ್ಯ ಅಧಿಕಾರಿಯಾಗಿಯೂ ನೇಮಕಗೊಂಡಂದಿನಿಂದ ಭರದ ಓಟ ಆರಂಭವಾಯಿತು. ಬ್ಯಾಂಕಿನ ಬಂಡವಾಳ 1969ರಲ್ಲಿ ಬರೇ ರೂ. 18 ಲಕ್ಷದಿಂದ 1976ರಲ್ಲಿ 2 ಕೋಟಿ 17 ಲಕ್ಷ; ಠೇವಣಿ ರೂ. 13.21 ಕೋಟಿಯಿಂದ ರೂ. 221 ಕೋಟಿ, ರಕ್ಷಣಾ ಬಂಡವಾಳ ರೂ. 1 ಕೋಟಿ 57 ಲಕ್ಷ ತಲುಪಿತು. ಬ್ಯಾಂಕಿನ ಬೆಳವಣಿಗೆ ಸರಾಸರಿ 42 ಪ್ರತಿಶತ ಅಭಿವೃದ್ಧಿಯನ್ನು ತೋರಿಸಿತಲ್ಲದೆ, ಶಾಖೆಗಳ ಸಂಖ್ಯೆ 377ಕ್ಕೂ, ಸಿಬ್ಬಂದಿಯವರ ಸಂಖ್ಯೆ 7,457ಕ್ಕೂ ಏರಿತು.

ಈ ಪರ್ವದಲ್ಲಿ ಬ್ಯಾಂಕು ತನ್ನ ಶಾಖೆಗಳನ್ನು ದೇಶದ ಮೂಲೆಮೂಲೆಗಳಲ್ಲಿ ಗ್ರಾಮೀಣ ಹಾಗೂ ಹಿಂದುಳಿದ ಪ್ರದೇಶಗಳಲ್ಲಿ ಸ್ಥಾಪಿಸಿ ವಿಜಯಾ ದುಂದುಭಿಯನ್ನು ಬೆಳಗಿತು. ಕೊಹಿಮಾ, ಶಿಲ್ಲಾಂಗ್, ಇಂಫಾಲ್, ಮಿಝೋರಾಮ್ ಇತ್ಯಾದಿ ನಗರಗಳಿಗೆ ಪ್ರವೇಶಿಸಿದ ದಾಕ್ಷಿಣಾತ್ಯ ಬ್ಯಾಂಕುಗಳಲ್ಲಿ ವಿಜಯಾ ಬ್ಯಾಂಕ್ ಪ್ರಥಮವಾಗಿದೆ.

### ಪ್ರಸ್ತುತ ಅಭಿವೃದ್ಧಿ ದಾಖಲೆ

ಇದೀಗ ಬ್ಯಾಂಕಿನ 604 ಶಾಖೆಗಳು ದೇಶದ 20 ರಾಜ್ಯಗಳಲ್ಲಿ ಹಾಗೂ 5 ಕೇಂದ್ರ ಸರಕಾರದ ನಿಯಂತ್ರಿತ ಪ್ರದೇಶಗಳಲ್ಲಿ ಹಬ್ಬಿವೆ. ಅವುಗಳಲ್ಲಿ 63 ಪ್ರತಿಶತ ಶಾಖೆಗಳು ಹಳ್ಳಿಪ್ರದೇಶ, ಗುಡ್ಡಗಾಡು ಹಾಗೂ ಹಿಂದುಳಿದ ರಾಜ್ಯಗಳಲ್ಲಿ ಸ್ಥಾಪಿಸಲ್ಪಟ್ಟಿವೆ. 500 ಕೋಟಿ ರೂಪಾಯಿಗಳಿಗೂ ಮಿಕ್ಕಿದ ಠೇವಣಿ ಇದ್ದು ರೂ.280 ಕೋಟಿಯಷ್ಟು ಸಾಲವನ್ನು ಕೊಡಲಾಗಿದೆ. ಒಟ್ಟು ಉದರಿಯ 37 ಪ್ರತಿಶತ ಕಾದಿರಿಸಿದ ಕ್ಷೇತ್ರಗಳಿಗೆ ಮೀಸಲಾಗಿದ್ದು ಸರಕಾರದ ಆದೇಶಾನುಸಾರ ಜನಸಾಮಾನ್ಯರ ಅಭಿವೃದ್ಧಿ ಹಾಗೂ ಉದ್ಧಾರ ಕಾರ್ಯಗಳಲ್ಲಿ ಸಕ್ರಿಯ ಪಾತ್ರವಹಿಸುತ್ತಿದೆ. ಬ್ಯಾಂಕಿನ ಕಾರ್ಯಕಲಾಪ ಸುಲಭವಾಗಿ ಸಾಗುವಂತಾಗಲು ಬ್ಯಾಂಕಿನಲ್ಲಿ ಸಿಬ್ಬಂದಿ ಶಿಕ್ಷಣ ಕಾಲೇಜು, ವಿದೇಶ ವಿನಿಮಯ ವಿಭಾಗ, ಕೃಷಿ ವಿಭಾಗ, ಆರ್ಥಿಕ ವಿಭಾಗ, ಇತ್ಯಾದಿ ವಿಶೇಷ ಇಲಾಖೆಗಳನ್ನು ಮುಖ್ಯ ಕಛೇರಿಗಳಲ್ಲಿ ಪ್ರಾರಂಭಿಸಲಾಯಿತು.

### ರಾಷ್ಟ್ರೀಕರಣ ಹಾಗೂ ಅನಂತರ

ವಿಜಯಾ ಬ್ಯಾಂಕು ಇತರ 5 ಬ್ಯಾಂಕುಗಳೊಂದಿಗೆ ಏಪ್ರಿಲ್ 1980ರಲ್ಲಿ ರಾಷ್ಟ್ರೀಕರಣಗೊಂಡಿತು. ಸರಕಾರದ ಹಾಗೂ ರಿಸರ್ವ್ ಬ್ಯಾಂಕಿನ ಆದೇಶಾನುಸಾರ ದೇಶದ ಸಾಮಾಜಿಕ, ಆರ್ಥಿಕ ಕ್ರಾಂತಿಕಾರ್ಯದಲ್ಲಿ ಯೋಗ್ಯ ಸಾಧನವಾಗಿ ತನ್ನಿಂದ ಸಾಧ್ಯವಾದಷ್ಟು ಸೇವೆಯನ್ನು ಸಲ್ಲಿಸುತ್ತಿದೆ. ಆದ್ಯ ಕ್ಷೇತ್ರಗಳಿಗೆ 40%, ಕೃಷಿಗಾಗಿ 16%, ಸಣ್ಣ ಕೈಗಾರಿಕೆಗಾಗಿ 12.5% ಸಾಲವನ್ನು ಮೀಸಲಾಗಿಸಲು ಬ್ಯಾಂಕ್ ಟೊಂಕ ಕಟ್ಟಿದೆ. ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ, ಭಿನ್ನಕ ಬಡ್ಡಿದರ, 20 ಅಂಶಗಳ ಕಾರ್ಯಕ್ರಮನ್ವಯ ಹೆಚ್ಚಿನ ರೀತಿಯಲ್ಲಿ ಆರ್ಥಿಕವಾಗಿ ಹಿಂದುಳಿದವರಿಗೆ ಸಹಾಯ ಮಾಡುತ್ತಿದೆ. 60 ಹಳ್ಳಿಗಳನ್ನು ಈಗಾಗಲೇ ದತ್ತು ಸ್ವೀಕಾರ ಮಾಡಿದೆ. ಸುಮಾರು 10,000 ಸಿಬ್ಬಂದಿಯವರು ಬ್ಯಾಂಕಿನ ಅಭಿವೃದ್ಧಿ, ದೇಶದ ಉನ್ನತ ಧ್ಯೇಯ ಹಾಗೂ ಸಮಾಜ ಕಲ್ಯಾಣ ಕಾರ್ಯದಲ್ಲಿ ಶ್ರಮಿಸುತ್ತಿದ್ದಾರೆ.

### ಯಶಸ್ಸಿಗೆ ಕಾರಣ

1960ರಲ್ಲಿ ಇತರ ಬ್ಯಾಂಕುಗಳೊಂದಿಗೆ ವಿಲೀನೀಕರಣಗೊಳ್ಳಬೇಕಾಗಿದ್ದ ವಿಜಯಾ ಬ್ಯಾಂಕು ರಾಷ್ಟ್ರವ್ಯಾಪಿ ಹಬ್ಬಿ

ದೇಶದ ಬ್ಯಾಂಕಿಂಗ್ ಚರಿತ್ರೆಯಲ್ಲಿ ದಾಖಲೆ ಸ್ಥಾಪಿಸುತ್ತಾ ಮುನ್ನಡೆಯಲು ಕಾರಣವೇನು ? ಈ ಪ್ರಶ್ನೆ ನ್ಯಾಯವಾಗಿ ಬರುತ್ತದೆ. ಉತ್ತರವಿಷ್ಟೆ: ಸುಯೋಗ ಸಂಧಿಯಲ್ಲಿ ಬ್ಯಾಂಕಿಗೆ ಶ್ರೀ ಸುಂದರ ರಾಮ ಶೆಟ್ಟರಂತಹ ದಕ್ಷ ನಿಷ್ಠಾವಂತ ಆಡಳಿತಗಾರರ ಮುಂದಾಳುತನ ದೊರೆಯಿತು. ಇತರ ಚಿಕ್ಕ ಬ್ಯಾಂಕುಗಳು ಇದರೊಂದಿಗೆ ವಿಲೀನವಾಗಿ ಇದನ್ನು ಬಲಯುತವನ್ನಾಗಿ ಮಾಡಿದುವು. ಶ್ರೀ ಶೆಟ್ಟರ ಆಡಳಿತದಲ್ಲಿ ಶಾಖಾಭಿವೃದ್ಧಿ ಕಾರ್ಯ ಭರದಿಂದ ಸಾಗಿ ದಿಗ್ವಿಜಯವನ್ನೇ ಮಾಡಿತು. ಸಿಬ್ಬಂದಿ ವರ್ಗ ಶಾರೀರಿಕವಾಗಿ, ಮಾನಸಿಕವಾಗಿ ಬ್ಯಾಂಕು ತಮ್ಮದು ಅದರ ಬೆಳವಣಿಗೆ ತಮ್ಮ ಏಳಿಗೆಗೆ ಕಾರಣ ಎಂಬ ಸತ್ಯಕ್ಕೆ ಅನುಗುಣವಾಗಿ ಕಾರ್ಯವೆಸಗಿದರು. ಹೊಸ ಹೊಸ ಅಧಿಕಾರಿಗಳು ಬಂದು ಸೇರಿ ತಮ್ಮ ನುರಿತ ಅನುಭವದ ಸಾರವನ್ನು ಈ ಬ್ಯಾಂಕಿನಲ್ಲಿ ಬಿತ್ತಿದರು. ಬ್ಯಾಂಕಿನ ಅಭಿವೃದ್ಧಿಗೆ ಬೇಕಾದ ಎಲ್ಲಾ ವಿಚಾರಗಳ ನಿರ್ಣಯ ಶೀಘ್ರದಲ್ಲಿ ದೊರೆಯುತ್ತಿತ್ತು.

ಒಂದೆಡೆ ಹುಮ್ಮಸ್ಸಿನ, ಹುರಿದುಂಬಿಸುವ ಆಡಳಿತ ವರ್ಗ, ಇನ್ನೊಂದೆಡೆ ನುರಿತ ನಿಷ್ಠಾವಂತ ನೌಕರ ವರ್ಗ, ಇವೆರಡರ ಸಂಗಮವಾದಾಗ ಯಶಸ್ಸಿನ ಬುಗ್ಗೆ ಚಿಮ್ಮುವುದು ವಿಶೇಷವಲ್ಲ. ವಿಜಯಾ ಬ್ಯಾಂಕಿನ ವಿಜಯ ಪತಾಕೆ ಬಹು ಎತ್ತರಕ್ಕೆ ಹಾರಿ ದೇಶದಲ್ಲಿ ಎಲ್ಲೆಡೆ ತನ್ನ ಅಸ್ತಿತ್ವವನ್ನು ತಿಳಿಯಪಡಿಸಿತು. ಅದೇ ರೀತಿಯಲ್ಲಿ ಜನತೆಗೆ ಈ ಬ್ಯಾಂಕಿನ ಮೇಲಿನ ವಿಶ್ವಾಸ ಹೆಚ್ಚಿತು. ಪರಿಣಾಮವಾಗಿ ಠೇವಣಿ ವೃದ್ಧಿ, ಉದರಿ ಹೆಚ್ಚಳ, ಬ್ಯಾಂಕಿನ ವಿಸ್ತರಣೆ. ಇದು ವಿಜಯಾ ಬ್ಯಾಂಕಿನ ಯಶಸ್ಸಿನ ಗುಟ್ಟು.

---


**ನಮೂನೆ IV** (ನಿಯಮ 8ನ್ನು ನೋಡಿ)

| | | | |
|---|---|---|---|
| 1 | ಪ್ರಕಟಣೆಯ ಸ್ಥಳ | ... | ಬೆಂಗಳೂರು-560 002 |
| 2 | ನಿಯತಕಾಲಿಕದ ಅವಧಿ | ... | ಅರ್ಧವಾರ್ಷಿಕ |
| 3 | ಮುದ್ರಕರ ಹೆಸರು | ... | ಶ್ರೀ ಎಂ. ಎಸ್. ಚಿಂತಾಮಣಿ |
| | ರಾಷ್ಟ್ರೀಯತೆ | ... | ಭಾರತೀಯ |
| | ವಿಳಾಸ | ... | ಈಸ್ಟರ್ನ್ ಪ್ರೆಸ್<br>ಮೊಜಾರಿಯಾ ಇಂಡಸ್ಟ್ರಿಯಲ್ ಎಸ್ಟೇಟ್<br>ಬನ್ನೇರುಘಟ್ಟ ರಸ್ತೆ, ಬೆಂಗಳೂರು-560 029 |
| 4 | ಪ್ರಕಾಶಕರ ಹೆಸರು | ... | ಶ್ರೀ ಚೋ. ನಂಜಪ್ಪ |
| | ರಾಷ್ಟ್ರೀಯತೆ | ... | ಭಾರತೀಯ |
| | ವಿಳಾಸ | ... | ಪ್ರಧಾನ ಕಾರ್ಯದರ್ಶಿ, ಸಮನ್ವಯ ಸಮಿತಿ<br>(ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)<br>ಭಾರತೀಯ ಸ್ಟೇಟ್ ಬ್ಯಾಂಕ್, 22, ಜಯಚಾಮರಾಜ ಒಡೆಯರ್ ರಸ್ತೆ, ಬೆಂಗಳೂರು-560 002 |
| 5 | ಸಂಪಾದಕರ ಹೆಸರು | ... | ಶ್ರೀ ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ (ಎಚ್ಚೆಸ್ಕೆ) |
| | ರಾಷ್ಟ್ರೀಯತೆ | ... | ಭಾರತೀಯ |
| | ವಿಳಾಸ | ... | 41, 6ನೆಯ ಮುಖ್ಯ ರಸ್ತೆ, ಸರಸ್ವತೀಪುರಂ<br>ಮೈಸೂರು-570 009 |
| 6 | ಒಟ್ಟು ಬಂಡವಾಳದ ಸೇ. 1ಕ್ಕಿಂತ ಹೆಚ್ಚಿನ ಷೇರುಗಳನ್ನು ಹೊಂದಿರುವ ಷೇರುದಾರರ ಅಥವಾ ಪಾಲುದಾರರ ಮತ್ತು ಪತ್ರಿಕೆಯ ಮಾಲೀಕರ ಹೆಸರು, ವಿಳಾಸಗಳು | | ಸಮನ್ವಯ ಸಮಿತಿ (ರಿ.)<br>(ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)<br>ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ<br>22, ಜಯಚಾಮರಾಜ ಒಡೆಯರ್ ರಸ್ತೆ<br>ಬೆಂಗಳೂರು 560 002 |

ನಾನು, ಚೋ. ನಂಜಪ್ಪ, ಮೇಲ್ಕಾಣಿಸಿದ ವಿವರಗಳು ನನ್ನ ನಂಬಿಕೆ ಮತ್ತು ತಿಳಿವಳಿಕೆಯಿಂದ ನಿಜವಾದುದೆಂದು ಈ ಮೂಲಕ ಘೋಷಿಸುತ್ತೇನೆ.

ಸಹಿ: **ಚೋ. ನಂಜಪ್ಪ**
ಪ್ರಕಾಶಕನ ರುಜು



# HOTEL RAJENDRAVILAS IMPERIAL

CHAMUNDI HILLS

MYSORE

# ದೇವನೊಬ್ಬ ನಾಮ ಹಲವು

ಧರ್ಮಗಳು ಹಲವಾರು
ಜಾತಿಗಳು ನೂರಾರು
ಒಂದೇ ಅರ್ಥದ ಬೇರೆ ಬೇರೆ ಶಬ್ದಗಳು
ಒಂದೇ ಗುರಿಗೆ ಬೇರೆ ಬೇರೆ ದಾರಿಗಳು

ಹಿಂದು, ಜೈನ, ಬೌದ್ಧ, ಮುಸ್ಲಿಮ್, ಕ್ರೈಸ್ತ, ಪಾರಸಿ ಧರ್ಮಗಳು ಬೇರೆ ಬೇರೆಯಾದರೂ ಸಮಾಜ ಒಂದೇ—ದೇಶ ಒಂದೇ. ಧರ್ಮದ ದೃಷ್ಟಿಯಲ್ಲಿ ಎಲ್ಲ ಜಾತಿ, ಮತ ಸರಿಸಮಾನ. ನಮ್ಮ ಧರ್ಮವು ನಮಗೆ ಪ್ರಿಯವಿದ್ದಷ್ಟೆ, ಇತರರ ಧರ್ಮವು ಅವರವರಿಗೆ ಪ್ರಿಯವಾದದ್ದು. ಒಂದೇ ದೇಶದಲ್ಲಿ, ಒಂದೇ ಸಮಾಜ-ದಲ್ಲಿ ಒಂದು ಧರ್ಮದವರು ಮತ್ತೊಂದು ಧರ್ಮದವರಿಗಿಂತ ಉತ್ತಮ-ರೆಂದು ನಡೆದುಕೊಳ್ಳುವುದು ಮನುಷ್ಯ ಜಾತಿಗೇ ದ್ರೋಹ ಬಗೆದಂತೆ. ಎಲ್ಲರೂ ಒಪ್ಪುವಂತಹ ಮಾತು; ಒಪ್ಪಿದ್ದೇವೆ; ಒಪ್ಪಿದಂತೆ ನಡೆದು-ಕೊಂಡರೆ, ನಮಗೂ ಕ್ಷೇಮ, ನಾಡಿಗೂ ಶ್ರೇಯಸ್ಸು—

"ನನ್ನ ದೇವರು ಅನಂತ ರೂಪಿ; ಒಮ್ಮೆ ಜಾತೀಯ
ಐಕ್ಯದ ರೂಪದಲ್ಲಿ ಇನ್ನೊಮ್ಮೆ ಅಸ್ಪೃಶ್ಯತಾ
ನಿವಾರಣೆಯ ರೂಪದಲ್ಲಿ ಅವನು ದರ್ಶನ ಕೊಡುವನು ..."

— ಗಾಂಧೀಜಿ

ಪ್ರಕಟಣೆ :

**ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ**

**ಬೆಂಗಳೂರು-೧**

